# CANARESE

# Hymn-Book

FIFTH EDITION

ದೇವರ ಸ್ತೋತ್ರಕ್ಕಾಗಿ

ದೇವಾಲಯಗಳಲ್ಲಿಯೂ, ಮನೆಗಳಲ್ಲಿಯೂ

ಭಕ್ತರು ಹಾಡ ತಕ್ಕ







MANGALORE
PUBLISHED BY PFLEIDERER & RIEHM
BASEL MISSION BOOK & TRACT DEPOSITORY
1867 

## ಗೀತಗಳ ಸೂಚನೆ.

## ಗೀತಗಳ ಸೂಚನೆ.





# ಗೀತಗಳು.

## I. ದೇವರ ಆರಾಧನೆ.

### ೧.

Mel. Gott ist gegenwärtig. 67.

**೧.** ದೇವರೆಮ್ಮ ಹತ್ರ!
ಆತಗೆದುರಾಗಿ
ಪ್ರಾರ್ಥಿಸೋಣ ಭೀತಿಯಾಗಿ.
ಹೌದು, ದೇವರಿಲ್ಲಿ!
ಆತಗಡ್ಡ ಬಿದ್ದು,
ಧ್ಯಾನಿಸೋಣ, ಸುಮ್ಮನಿದ್ದು.
ಭಕ್ತರೆ,
ಆತಗೆ
ಹೃದವನ್ನು ತರ್‍ರಿ;
ಸೇವೆ ಮಾಡ ಬರ್‍ರಿ!

**೨.** ನಿಂಗೆ ದೂತಸೈನ್ಯ
ಪರಲೋಕದಲ್ಲಿ
ನಿತ್ಯ ಹಗಲಿರುಳಲ್ಲಿ,
“ಶುದ್ಧ, ಪರಿಶುದ್ಧ
ಕರ್ತ!” ಎಂತ, ಹಾಡಿ,
ಬೊಗ್ಗು ತಾರೆ, ಸ್ತೋತ್ರ ಮಾಡಿ.
ಇಲ್ಲಿಯು
ಲಾಲಿಸು
ನಮ್ಮ ದೀನ ಸ್ತೋತ್ರ;
ಇಕ್ಕು ನಿನ್ನ ಶ್ರೋತ್ರ!

**೩.** ನಮಗಿನ್ನು ಬೇಡ
ಈ ಪ್ರಪಂಚಲಯ;
ಸಾಕು, ಕರ್ತ, ನಿನ್ನ ದಯ!
ನಿನ್ನ ವಶರಾಗಿ,
ಪರಿಪೂರ್ಣ ಸೇವೆ
ಮಾಡ ಸಿದ್ಧರಾಗಿದ್ಧೇವೆ.
ದೇವರೆ,
ನಿನಗೆ
ತಕ್ಕದೆಮ್ಮ ಧ್ಯಾನ,
ತಕ್ಕದೆಲ್ಲ ಮಾನ!

**೪.** ನನ್ನ ಹೃದದಲ್ಲಿ
ದಯದಿಂದ ಬಂದು,
ಪರಿಶುದ್ಧ ಜಲ ತಂದು,
ತೊಳೆ ಪಾಪಮಲ!
ಹೃದದಂಧಕಾರ
ಆಗಲಿನ್ನು ಪರಿಹಾರ!
ನಿನ್ನನು
ಎಂದಿಗು
ನಾವು ನೆನೆಯೋಣ,
ನಿತ್ಯ ಸೇವಿಸೋಣ!

## ೨.

Mel. Allein Gott in der Höh sei Ehr. 15. 102. 105.

**೧.** ದೇವ್ರೆಷ್ಟೊ ಪ್ರೀತಿ ಮಾಡಿದ
ಭೂಲೋಕಕಣೆ ಇಲ್ಲ!
ಕಂಡಾತ ದ್ರೋಹಜಾತಿಯ,
ಉಪೇಕ್ಷೆ ಮಾಡಲಿಲ್ಲ.
ಈ ಪ್ರೀತಿಯಂತವರಿತು
ದಯಾಬ್ಧಿನೆಲ ಕಾಣಲು
ಸಾಮರ್ಥ್ಯ ಯಾರಿಗುಂಟು?

**೨.** ಅಸಹ್ಯ ಪಾಪಮಲದಿ
ದೇವಾರಿಲೋಕ ಬಿತ್ತು;
ಆದಾಗ್ಯು ತಂದೆ ಒಲ್ಮೆಲಿ
ಕಟಾಕ್ಷಪೂರ್ತಿಯಿತ್ತು,
ವಿಮುಕ್ತಿ ಮಾಡುವದಕೆ
ಕೆಟ್ಟೋದ ಪಾಪಿಜಾತಿಗೆ
ಕುಮಾರನನ್ನು ಕೊಟ್ಟ.

## ೩.

Mel. Grosser Gott, in dem ich schwebe. 140. 20.

**೧.** ನನ್ನ ದೇವ, ಪ್ರಿಯ ತಂದೆ!
ಬಡ ಬಾಲ ನಾನು ಬಂದೆ.
ಕರ್ತ, ಆದಿವಸ್ತುವೆ!
ನಿನ್ನ ಮುಂದೆ ವಂದಿಪೆ.

**೨.** ದೂತಗಣ ಘನದಿಂದ
ಸ್ತೋತ್ರ ಮಾಡೊ ಕಡೆಯಿಂದ
ನೀನು ಕೃಪಾನೇತ್ರದಿ
ಧೂಳಿಯೆನ್ನ ನೋಡುತಿ.

**೩.** ದೇವಗೃಹ, ದಿವದ್ವಾರ
ಅವಿಶ್ವಾಸಿ ಕಾಣಲಾರ.
ನಿಂಗೆ ದೂರವಾದೆನ್ನೈ!
ಎಷ್ಟೊ ಭ್ರಾಂತಿಯಾಯಿತ್ತೈ!

**೪.** ಈ ಪ್ರಪಂಚದಾಶೆಯಿಂದ
ಕೆಟ್ಟು, ನಿನ್ನ ಐಕ್ಯದಿಂದ

ಅಗಲಿರಲಾರೆನು!
ನನ್ನ ಪ್ರಾಣ ರಕ್ಷಿಸು!

೫. ಬುದ್ಧಿ ಬಂತು ಕಡೆಯಲ್ಲಿ.
ನಿನ್ನ ಸನ್ನಿಧಾನದಲ್ಲಿ
ಶೇರಿ, ಪ್ರಿಯ ತಂದೆಯೆ,
ನಿತ್ಯ ಜೀವ ಹೊಂದಿದೆ.

೬. ಕೃಪೆಯಿಂದ ಕ್ಷಮೆಯ
ನ್ನ,
ಕೃಪೆಯಿಂದ ಜೀವವನ್ನು
ಪಡಕೊಂಡೆ. ದೇವರೇ,
ನನ್ನ ಗತಿ ಕೃಪೆಯೇ!

---

೪.

Mel. Ein' feste Burg ist unser Gott. 42.

೧. ಯೆಹೋವನೇ ತಾತ್ಕಾ
ಲಿಕ
ಸುಭದ್ರ ದುರ್ಗಸ್ಥಲ;
ಶತ್ರುಂಗಳನ್ನು ಜೈಸುವ
ಶ್ರೇಷ್ಠಾಸ್ತ್ರ, ನಿಜ ಬಲ!
ಹಳೇ ವೈರಿಯು
ಈಗ ಮುನಿದು,
ಮಹಾ ಶಕ್ತಿಯಿಂ,
ಕುಯುಕ್ತಿತಂತ್ರದಿಂ
ನಮ್ಮೆದುರಾಗಿದ್ಧಾನೆ.

೨. ನಮ್ಮಲ್ಲಿ ತ್ರಾಣವಿಲ್ಲವು,
ನಾಂ ಗೆಲ್ಲುವವರಲ್ಲ;
ಯೆಹೋವನಾಯ್ದ ಶೂರನು
ವಿಜಯ ಕೊಡ ಬಲ್ಲ.
ಅದಾರೆಂದರೆ,
ಯೇಸು ಕ್ರಿಸ್ತನೆ!
ಎಲ್ಲಾ ಸೃಷ್ಟಿಗು
ಸರ್ವೇಶನಾತನು;
ಮತ್ತೊಬ್ಬ ದೇವರಿಲ್ಲ!

೩. ಭೂ ದೆವ್ವ ತುಂಬಿದ್ದಾದ
ರು
ನಮ್ಮನ್ನು ನುಂಗೋದಿಲ್ಲ.
ವಿಜಯಗತಿ ನಮ್ಮದು!
ನಮ್ಮಲ್ಲಿ ಭಯವಿಲ್ಲ.
ಈ ಲೋಕೇಶನು
ಶಿಟ್ಟು ಪಟ್ಟರು,
ಹ್ಯಾಗೂ ನಿಲ್ಲನು.
ಹಾ, "ತೀರಿಕಾಯಿತು!"
ಈ ಒಂದೆ ಮಾತು ಸಾಕು.

೪. ಯಾರಾರು ಬಂದು ಕೀ
ಳ್ವರೆ

ಪವಿತ್ರ ವಾಕ್ಯವನ್ನು?
ದಿವ್ಯಾತ್ಮವಾಳಿ ಕೊಳ್ಳುತೆ
ಸದ್ಭಕ್ತಸಭೆಯನ್ನು.
ಹೆಣ್ಣೂ ಮಕ್ಕಳೂ
ಹೊನ್ನೂ ಹೆಸರೂ
ಎಲ್ಲಾ ಹೋಗಲಿ!
ನೀ, ವೈರಿ, ಸೋಲುವಿ.
ರಾಜ್ಯಾದಿ ನಮ್ಮ ಪಾಲು!

## II. ಕರ್ತನಾದ ಯೇಸುವಿನ ಆರಾಧನೆ.

### ೫.

Mel. My Jesus, be thou near me. 112.

೧. ಈ ಜೀವಕತ್ತಲಲ್ಲಿ
ನಮ್ಮನು,
ಓ ಕರ್ತ, ತೇಜ ಚಲ್ಲಿ,
ನಡಿಸು!
ಏನಿಹದಲ್ಲಿ?
ಕ್ಷೇಮವನಲ್ಲಿ
ಕೊಡಲು ಬಲ್ಲಿ.
ಅದೇ ಬೇಕು!

೨. ಈ ಲೋಕಕಡಲಲ್ಲಿ
ನಮ್ಮನು
ವಿಶ್ವಾಸದೋಣಿಯಲ್ಲಿ
ದಾಟಿಸು!
ಇಲ್ಲಿ ಪ್ರಯಾಸ;
ಅಲ್ಲಿಯ ವಾಸ
ನಿತ್ಯ ವಿಲಾಸ.
ಅದೇ ಬೇಕು!

### ೬.

Mel. Ich will dich lieben, meine Stärke. 154.

೧. ಓ ಅತಿಪ್ರಿಯ ನಿಜ ತ್ರಾ
ಣ,
ಓ ಅತಿಪ್ರಿಯ ಒಡವೆ!
ನಿಂಗೊಲಿಯುತ್ತದೆನ್ನ ಪ್ರಾಣ;
ನೀನೆನ್ನ ನಿತ್ಯ ಆಶೆಯೆ!
ಹೃದ್ ಭಿನ್ನವಾಗೊ ವರೆಗು
ನೀ ಜೀವಜ್ಯೋತಿಯು!

೨. ಓ ಅತಿಪ್ರಿಯ ಪ್ರಾಣ
ಸ್ಥಾನ,
ನೀ ಪರಮೋತ್ತಮಾಪ್ತನು!

ನಿನ್ನೊಳ್ಮೆ ಮೈಮೆ ಉಳ್ಳ ಧ್ಯಾನ
ನಾ ಮಾಳ್ಪೆ ಸಾಯೊ ವರೆಗು.
ನೀ ಮದಲಿಂಗನೆನಗೆ,
ಓ ಕುರಿಮರಿಯೆ!

೨. ಅನಾದಿರಮಣೀಯ ಕಾಂತಿ!
ನಾ ಮರ್ತ್ಯ ನಿನ್ನ ಸೇವೆಯ,
ನಿಂಗ್, ಇಷ್ಟ ಗತಿ, ಸತ್ಯ ಶಾಂತಿ!
ನಾ ಪ್ರೀತಿ ಮಾಡದಕಟ,
ಇಷ್ಟೊತ್ತು ಸುಮ್ಮನಿದ್ದದು
ನಂಗೊಂದೆ ಚಿಂತೆಯು.

೪. ನಿನ್ನರ್ಸಲೀ ಜಗದ್ವಿಚಾರ
ಸಂಭ್ರಮ ಕೊಟ್ಟಿತೆನಗೆ;
ಕಣ್ಣಾಗಣದಿಹದಂಧಕಾರ
ಬೆಳ್ಕೆಂತ ಅಲೆದಾಡಿದೆ.
ನಿನ್ನೊಳ್ಮೆಯಿಂದಲೀಗಲೇ
ನಾ ಕಂಡೆ ನಿನ್ನನೇ.

೫. ಓ ಮೈಮೆಯಾದ ಸತ್ಯಾದಿತ್ಯ!
ನೀ ಮೂಡೆ, ದೃಷ್ಟಿ ಹೊಂದಿದೆ.
ಓ ಶಾಪಪರಿಹಾರಿ! ನಿತ್ಯ
ಆನಂದವಿತ್ತಿ ನನಗೆ.
ನಿನ್ನಾಶೀರ್ವಾದ ರೋಗಿಗೆ
ಆರೋಗ್ಯ ಕೊಟ್ಟದೆ!

೬. ನನ್ನಡಿ ಲೋಕಯಾತ್ರೆಯಲ್ಲಿ
ಜಾರ್ರ್ಯಾಡದಂತೆ ಕಾಯ್ವುದು!
ನೀನಾದು ಕೊಂಡ ಮಾರ್ಗದಲ್ಲಿ
ಕೈ ಹಿಡಿದೆನ್ನ ನಡಿಸು!
ನನ್ನಾತ್ಮ ತುಂಬು ಸರ್ವಥಾ,
ಓ ತ್ರಾಣಿಭಾಸ್ಕರಾ!

೭. ಕಣ್ಣೀಲಿ ಹುಟ್ಟಿತಶ್ರುಧಾರೆ,
ಎದೇಲಿ ಶುದ್ಧ ಮೋಹವು;
ನಾ ನಿನಗೆದುರಾಡಲಾರೆ;
ಆಸಕ್ತ ದಾಸನಾದೆನು.
ನನ್ನಾತ್ಮ, ಬುದ್ಧಿ, ಮನಸು
ನಿಂಗೊಳಗಾದವು.

೮. ಎನ್ ಮುಡಿಯೇ! ಅ ಘೋರ ಕಷ್ಟ
ಬಂದಾಗ್ಯು, ಪ್ರೀತಿ ಕುಂದದು.
ನಿನ್ನಾಳು ನಾನು! ಪ್ರಾಣನಷ್ಟ
ನಂಗೇನು? ಕರ್ತ, ಸಲುಹು!
ಹೃದ್ ಭಿನ್ನವಾಗೊ ವರೆಗು
ನೀ ಜೀವಜ್ಯೋತಿಯು!

## ೭.

Mel. Herr Jesu, Gnadensonne. 117.

೧. ಓ ನೀತಿಸೂರ್ಯನಾದ
ಸಜ್ಜೀವಬೆಳಕೆ!
ಕಟಾಕ್ಷಪೂರ್ತಿಯಾದ
ಓ ಕರ್ತ, ಯೇಸುವೆ!
ಕೊಡೈಯ್ಯ ಜೀವವನ್ನು,
ಸುಜ್ಞಾನಬೆಳಕನ್ನು
ಕೆಟ್ಟೋದ ಪಾಪಿಗೆ!

೨. ನನ್ನಘರಾಶಿಯನ್ನು
ನೀ ಮನ್ನಿಸೆನಗೆ;
ಬಿಟ್ಟಿಲ್ಲ ಕೋಪವನ್ನು,
ಬಾ, ಬಾ ಸಹಾಯಕೆ!
ನೀ ಕೊಟ್ಟ ಸಮಾಧಾನ
ನನ್ನಾತ್ಮದನ್ನಪಾನ.
ಆಲೈಸೊ, ಕರ್ತನೆ!

೩. ನನ್ನಾತ್ಮದೊಳಗಿಂದ
ನೀ ದುಷ್ಟ ಗುಣವ
ಕಿತ್ತಾಕಿ, ಇಂದಿನಿಂದ
ನಾ ನಿನ್ನ ಪರಮ
ಸುಭಕ್ತಿಯನ್ನು ಮಾಡ,
ನಿನ್ನನ್ನು ಕೊಂಡು ಆಡ
ಕೊಡಭಿಲಾಷೆಯ!

೪. ಆತ್ಮಾಪ್ತ, ಜ್ಞಾನವನ್ನ
ಹೆಚ್ಚಾಗಿ ಕಳುಹು!
ಸದ್ವಾಕ್ಯದಿಂದ ನನ್ನ
ಪೂರಾಗಿ ವ್ಯಾಪಿಸು!
ವಿಶ್ವಾಸದೈಕ್ಯದಲ್ಲಿ,
ಸಹೋದ್ರಪ್ರೀತಿಯಲ್ಲಿ
ಸಂವರ್ಧಿಸೆನ್ನನು!

೫. ನಾ, ನಿನ್ನ ವಶವಾಗಿ,
ದುರಾಶೆ ತ್ಯಜಿಸಿ,
ಪಾಪಕ್ಕೆ ಮೃತನಾಗಿ,
ನಿನ್ನಲ್ಲಿ ಬಾಳಲಿ!
ನಿನ್ನೈಕ್ಯವೆನ್ನ ಗುರಿ!
ನಾ ತಾಳ್ವೆ ಕ್ರೂಜೆಯುರಿ
ನೀ ಕೊಟ್ಟ ಬಲದಿ.

೬. ನಾನಾಗದಂತೆ ಭ್ರಷ್ಟ,
ನನ್ನನ್ನು ದೃಷ್ಟಿಸು;
ಓ ಕರ್ತ, ಆತ್ಮನಷ್ಟ
ನಾ ಪಡ ಬಾರದು!
ನಿನ್ನಾಜ್ಞೆಯರ್ಥವನ್ನು
ಪೂರೈಸ ಶಕ್ತಿಯನ್ನು
ಕೊಟ್ಟೆನ್ನ ಸಲುಹು!

## ೮.

Mel. Wir sind ein Eigenthum des Lamms. 111.

೧. ಓ ಪ್ರಿಯ ಕರ್ತ, ನಿನಗೆ
ಸ್ವಕೀಯ ಜನವಾಗಿದ್ದೇವೆ.
ನಿನ್ನರಿತವ ನಿನ್ನ ಸೇವೆ
ಸಂತೋಷದಿಂದ ಮಾಡನೆ?

೨. ಓ ರಾಜ, ನನ್ನ ಹೃದಕೆ
ನಿನ್ನಂತೆ ಯಜಮಾನನೆಲ್ಲಿ?
ನೀ ಶ್ರಮ ತಾಳಿ, ರಕ್ತ ಚೆಲ್ಲಿ,
ವಿಮುಕ್ತಿ ಗೈದಿ ನನಗೆ.

೩. ವಿಸ್ತಾರಮಾರ್ಗವಾರಿಸಿ
ಅನೇಕರಳಿಧೋಗುವಲ್ಲಿ
ನಾನಾಯ್ದ ಸಣ್ಣ ದಾರಿಯಲ್ಲಿ
ಸಜ್ಜೀವ ನನ್ನದಾಗಲಿ!

೪. ತಕ್ಕೊಳ್ಳು ನನ್ನ, ಕರ್ತನೆ!
ನಾ ಬಲಹೀನ, ನೀನು ಶಕ್ತ;
ನೀನಿದ್ದ ಮೇಲೆ ಬಡ ಭಕ್ತ
ಶೇರೋನು ನಿತ್ಯ ಸೌಖ್ಯಕೆ.



## ೯.

L. M. Jesus, thy blood and righteousness. 130. 24. 44. 45. 131. 132.

೧. ಓ ಯೇಸು, ನಿನ್ನ ನೀತಿಯೆ
ನನ್ನಲಂಕಾರವಸ್ತ್ರವು;
ಜಗತ್ತು ಸುಟ್ಟು ಹೋದರೆ,
ಅದನ್ನು ಹೊದ್ದು ನಿಲ್ವೆನು.

೨. ನಾ ಗೋರಿಯಿಂದ ಹೊರಟು,
ಸ್ವಪಟ್ಣಕೇರಿ ಹೋಗಲು,
ಕ್ರಿಸ್ತೇಸು ನನಗಾಗಿಯು
ಸತ್ತೆದ್ದನೆಂತ, ನಾಚೆನು.

೩. ಆ ದಿನದಲ್ಲಿ ನನಗೆ
ಯಾರೂ ವಿರೋಧ ನಿಲ್ಲರು;
ಕ್ರಿಸ್ತೇಸು ರಕ್ತದಿಂದಲೆ
ದುಷ್ಕರ್ಮ, ಭಯ ಹೋದವು.

೪. ಓ ಜೀವವಿಲ್ಲದವರೇ,
ಈ ವಾಕ್ಯ ಕೇಳ ತಕ್ಕದು—
"ಕ್ರಿಸ್ತೇಸುರಕ್ತನೀತಿಯೇ
ನಿಮ್ಮಲಂಕಾರವಸ್ತ್ರವು!"



## ೧೦.

Mel. Ach mein Herr Jesu, dein Nahesein. 109.

೧. ಓ ಯೇಸು, ನಿನ್ನ ಸಮೀಪವು
ಸುಶಾಂತಿ ಮನಕೆ ಶಿಕ್ಕೋದು;
ರಮ್ಯವಾದ ನಿನ್ನ ಕಟಾಕ್ಷದೃಷ್ಟಿ
ಸಂತೋಷಪೂರಿತ ಪ್ರಿಯ ವೃಷ್ಟಿ
ದೇಹಾತ್ಮಕೆ.

೨. ನಿನ್ನೆಳೆ ನಗೆಯ ಮೋರೆಯು
ಈಗೆಮ್ಮ ಕಣ್ಣಿಗೆ ಕಾಣದು;
ಆತ್ಮದಲ್ಲಿ ನಿನ್ನ ಅನಂತ ಪ್ರೀತಿ
ನಮ್ಮನ್ನು ಹರಸುವಂಥ ರೀತಿ
ಪ್ರತ್ಯಕ್ಷವು.

೩. ನಿನ್ನಲ್ಲಿ ಹಗಲು ಇರುಳು
ಸಂಯುಕ್ತ ಜನರು ಮುಕ್ತರು,
ಓ ದಯಾಳು, ಕರುಣೆ ತುಂಬಿದಂಥ,
ಸಮಸ್ತ ಪಾಪವ ಮನ್ನಿಪಂಥ
ಆತ್ಮಾಪ್ತನೇ!

೪. ನಿನ್ನಿಂದ ದುಃಖದ ಹರವು;
ನಿನ್ನೊರ್ತು ಸುಖವು ಕಾಣದು.
ನಿನ್ನ ಪ್ರೀತಿಧ್ಯಾನವು ಪೂರ್ಣವಾಗಿ
ನಮ್ಮಲ್ಲಿ ವಾಸಿಸುತಿರಲಾಗಿ,
ತೃಪ್ತ್ಯಾಯಿತು.

೫. ನಿನ್ನಿಂದ ಸುಖದ ದಾನವು
ಈ ಬಡ ಪಾಪಿಗೆ ಬಂದುದು;
ನಿನ್ನ ಪ್ರೀತಿ ಕಂಡು, ನಿರಂತವಾಗಿ
ನಿನ್ನನ್ನು ಹರುಷಧ್ವನಿಯಾಗಿ
ಕೊಂಡಾಡುವೆ.

---

## ೧೧.

Mel. Hab ich recht und wahr vernommen. 160.

೧. ಕಂಡು ಬಪ್ಪ ಬಾಲರನ್ನು,—
"ಅಡ್ಡ ಕಟ್ಟದೆ,
ಬರಲೀಸಿ ಮಕ್ಕಳನ್ನು!"
ಎಂತ, ಕೂಡಲೆ
ಯೇಸು, ದಯೆಯ
ಮಾಡಿ, ಮಕ್ಕಳ
ಅಪ್ಪಿ ಕೊಂಡು, ಆಶೀರ್ವಾದ
ಕೊಟ್ಟನುತ್ತಮ ಪ್ರಸಾದ!

೨. ನಾನು ಸಹ ಮಗುವಲ್ಲ?
ಬಂದೆನೇಸುವೇ!
ಆಗ ವರ ಕೊಟ್ಟೆಯಲ್ಲ?
ಈಗ ಕೊಡಿಯೇ?
ನಿನ್ನ ಪಾದಕೆ
ಬಿದ್ದೆನೇಸುವೇ!
ಮುಕ್ತನಾದೆನೇಸುವಲ್ಲಿ,
ಮುಕ್ತನಿಹಪರದಲ್ಲಿ!



## ೧೨.

Mel. Wachet auf, ruft uns die Stimme. 47.

೧. ಕರ್ತನು ಮನುಷ್ಯನಾಗಿ
ಈ ಭೂಮಿಯಲ್ಲಿ ಹುಟ್ಟಲಾಗಿ,
ದೂತೌಜಸೇನೆ ಹಾಡಿತು.
ಸತ್ತ ಮೇಲೆ ಜಯ ಗೊಂಡು,
ದ್ಯುಸಿಂಹಪೀಠವೇರಿ ಕೊಂಡು,
ಸರ್ವಾಧಿಕಾರಿ ಕೂತನು.
ಓ ಜೀವದರಸಾ,
ಅಲ್ಲಿಂದ ಬೇಗ ಬಾ!
ಹೌದು, ಹೌದು,
ಮಹೋನ್ನತ,
ನಿನ್ ಹತ್ತರಾ
ನಮ್ಮನ್ನು ಕರೆಕೊಳ್ಳ ಬಾ!

೨. ವಿಶ್ವಾಸವೀಗ ಛಾಯೆಯುಳ್ಳ
ವಾಕ್ಕನ್ನಡೀಲಿ ತೇಜವುಳ್ಳ
ನಿನ್ನನ್ನು ಮುಂದ ನೋಡುತೆ;
ಇನ್ನು ಮೇಲೆ ಎದುರಾಗಿ
ನಿನ್ನನ್ನು ದೃಷ್ಟಿಸೋದಕಾಗಿ
ಹೃದ್ ಅಭಿಲಾಷಿಸುತ್ತದೆ.
ಪವಿತ್ರ ಆತ್ಮವೂ
ಮೇಲಾದ ಸಭೆಯೂ—
ಯೇಸು, ಕರ್ತ,
ಬಾ! ಎನ್ನಲು,
ನಾವಿಲ್ಲಿಯು—
ಬಾ, ಯೇಸು! ಎಂತ, ಹಾಡೊದು.



## ೧೩.

Mel. Ringe recht wenn Gottes Gnade. 13. 17. 22. 118.

೧. ಕ್ರಿಸ್ತ, ನಿನ್ನ ಭಕ್ತರನ್ನು
ಪ್ರೀತಿಯಿಂದ ಆಳಿ ಕೋ!
ಪ್ರೀತಿಯಲ್ಲಿ ಸಭೆಯನ್ನು
ಪೂರ್ಣ ದೃಢ ಪಡಿಸೋ!

೨. ನಿನ್ನ ಪ್ರೀತಿ ಸಭ್ಯರನ್ನು
ಇಡಲೈಕ್ಯದೊಳಗೆ!

ಸುಡಲಹಂಕಾರವನ್ನು
ನಿನ್ನ ಪ್ರೀತಿಬಲವೆ!

೩. ನೀನೆ ಪ್ರೀತಿ; ಪ್ರೀತಿಯಿಂದ
ತುಂಬಲೆಲ್ಲ ಪ್ರಜೆಯು!
ಭಕ್ತಹೃದಪೀಠದಿಂದ
ಪ್ರೀತಿಯಗ್ನಿ ಏಳಿಸು!

೪. ನಮ್ಮ ಸಭೆ ಒಂದೆ ವಂಶ;
ನಿನ್ನ ವಂಶ, ಯೇಸುವೆ!
ಒಂದೆ ರಕ್ತ, ಒಂದೆ ಮಾಂಸ,
ಒಂದೆ ಜೀವ ನಮಗೆ.

೫. ಪ್ರೀತಿಯಿಂದ ನಿನ್ನ ಪ್ರಾಣ
ಕ್ರೂಜೆಯಲ್ಲಿ ಅರ್ಪಿಸಿ,
ನೀನೆ ಹೋಗಿ, ವಾಸಸ್ಥಾನ
ನಮಗುಂಟು ಮಾಡಿದಿ.

೬. ದಿವ್ಯ ಪ್ರೀತಿ, ಸಭೆಯಲ್ಲಿ
ವಾಸ ಮಾಡು ನಿತ್ಯಕು!
ನಿನ್ನ ಪರರಾಜ್ಯದಲ್ಲಿ
ನಮ್ಮನೆಲ್ಲ ಶೇರಿಸು!



## ೧೪.

Mel. Ich bete an die Macht der Liebe. 107.

೧. ಕ್ರಿಸ್ತೇಸುವಲ್ಲಿ ಕಾಣಬಂದ
ಅಪಾರ ಪ್ರೀತಿ ಅರಿತು,
ಅರಿಷ್ಟಘೊಸ ಜೀವ ತಂದ
ಕಟಾಕ್ಷಕಡ್ಡ ಬೀಳ್ವೆವು.
ನಾವಿನ್ನು ನಮ್ಮ ಮರೆಯೋಣ,
ಪ್ರೇಮಾಬ್ಧಿಯಲ್ಲಿ ಮುಳುಗೋಣ!

೨. ನಿನ್ನೊಲ್ಮೆ, ಯೇಸು, ರಕ್ತಾತ್ರಾಣ;
ನಿನ್ನಾಶೀರ್ವಾದ ಗತಿಯು.
ನೀನೆನ್ನ ಹೃದದಂತಃಪ್ರಾಣ;
ನೀನೆನ್ನ ನಿಜ ಮೋಕ್ಷವು.
ಓ ಪ್ರೀತಿ, ಅಪ್ಪಿ ಕೊಳ್ಳು ನನ್ನ,
ಆರೈಸಿ ಕೊಂಡು ಶಿಶುವನ್ನ!

೩. ನೀ ಮಾತ್ರ ಬೇಕು, ನೀನಗತ್ಯ;
ನಾ ನಿನಗಾಗಿ ಬಾಳುವೆ.
ಪ್ರಪಂಚ ಪೂರ್ಣವಾಗ್ಯಸತ್ಯ;
ನನ್ನಾಶಾಬಂಧ ನಿನ್ನಲೆ!

ನಿನ್ನಲ್ಲಿ ಶಾಂತಿ, ಹೃತ್ಸಂತೋ
ಷ;
ನಿನ್ನಲ್ಲಿ ಶ್ರೇಷ್ಠ ಆತ್ಮಪೋಷ.

೪. ಓ ಯೇಸು, ನಿನ್ನ ನಾ
ಮವನ್ನು
ಕೊಂಡಾಡುತೇವೆ ಎಂದಿಗು!
ಓ ಪ್ರೀತಿಮೂಲ, ಪ್ರೀತಿಯ
ನ್ನು
ನಮ್ಮೊಳು ನೀನು ಹುಟ್ಟಿಸು!
ನೀ ತೋರಿಸಿತ್ತ ದಾರಿಯಲ್ಲಿ
ಶೇರೋಣ ಜೀವರಾಜ್ಯದಲ್ಲಿ.



## ೧೫.

Mel. Nun danket alle Gott.
25. 50. 52. 135. 136.

೧. ಕ್ರಿಸ್ತೇಸುವೊಡನೇ
ನಾ ಕಾರ್ಯ ತೊಡಗೋದು;
ಕ್ರಿಸ್ತೇಸುವೊಡನೇ
ನಾ ಕಾರ್ಯ ಮುಗಿಸೋದು.
ಕಣ್ದೆರೆದಿರಲು,
ಕಣ್ಮುಚ್ಚಲೆಂದಿಗು
ಕ್ರಿಸ್ತೇಸುವಲ್ಲಿಯೇ
ಹೃದೃಷ್ಟಿ ಇಹುದು.

೨. ಕ್ರಿಸ್ತೇಸುವಲ್ಲಿಯೇ
ಜಗದ್ವಿಚಾರವೇನು?
ನಂಗಾತನಿದ್ದರೆ
ಸಂದೇಹ, ಭೀತಿ ಏನು?
ಕ್ರಿಸ್ತೇಸುದಯೆಯು
ಅಮಿತ ಭಾಗ್ಯವು;
ಕ್ರಿಸ್ತೇಸುಸಾಮೀಪ್ಯ
ಆನಂದದಬ್ಧಿಯು.

೩. ಕ್ರಿಸ್ತೇಸುವಾಕ್ಯವು
ಅಮೂಲ್ಯ ಮಂತ್ರಘೋಷ;
ಕ್ರಿಸ್ತೇಸುನೀತಿಯು
ಪವಿತ್ರ ತೇಜಪೋಷ.
ಕ್ರಿಸ್ತೇಸುವಲ್ಲಿಯೇ
ನಾ ಭಯ ಪಡೆನು;
ಕ್ರಿಸ್ತೇಸುವಲ್ಲಿಯೇ
ಮೃತೀಲಿ ಜೀವವು!



## ೧೬.

Mel. Gott will's machen.
118. 13. 17. 22.

೧. ನನ್ನದಯೆಯುಳ್ಳ ಮಿತ್ರ,
ನನ್ನ ಪ್ರಿಯ ರಕ್ಷಕಾ,
ಪ್ರೀತಿಯಿಂದ, ಓ ಪವಿತ್ರ,
ನನ್ನ ಶುದ್ಧ ಮಾಡ ಬಾ!

೨. ದೊಡ್ಡ ಪಾಪಹೊರೆಯನ್ನು
ಪರಿಹರಿಸೇಸುವೇ!
ದುಷ್ಟನಧಿಕಾರವನ್ನು
ಮುರಿಧಾಕು, ಶಕ್ತನೇ!

೩. ನಾನು ರೋಗಿ; ಹೊಸ ತ್ರಾಣ
ದಯೆ ಪಾಲಿಸೆನಗೆ!
ಸಾಯುತೇನೆ; ನನ್ನ ಪ್ರಾಣ
ವರ್ಧಿಸುಸುಪತಿಯೆ!

೪. ನಿನ್ನ ದಿವ್ಯ ಆತ್ಮಸ್ನಾನ
ಕೊಡು ನನ್ನ ಆತ್ಮಕೆ!
ನಿನ್ನ ಜೀವದನ್ನಪಾನ
ಬಡಿಸೈಯ ಧೀನಗೆ!



## ೧೭.

Mel. Gott sey Dank in aller Welt. 12. 19. 21. 61.

೧. ನನ್ನ ಯೇಸು ಕ್ರಿಸ್ತನೆ,
ನಿನ್ನ ಸ್ತೋತ್ರ ಹಾಡುವೆ.
ನಿನ್ನ ದಯೆ ನನಗೆ
ಅತಿಹಿತವಾಗಿದೆ!

೨. ನಿನ್ನ ಚಿತ್ತದಿಂದಲೆ
ಇಹದಲ್ಲಿ ಹುಟ್ಟಿದೆ;
ನಿನ್ನ ಕೃಪೆಯಿಂದಲೆ
ಪರ ಮೋಕ್ಷ. ಶೇರುವೆ.

೩. ಶಾಪವಂಶಕೋಸ್ಕರ
ನೀನು ತಾಳ್ದಿ ಶಾಪವ;
ನಿನ್ನ ಜೀವದರ್ಪಣೆ
ನಮ್ಮ ಜೀವರಕ್ಷೆಯೆ!

೪. ಗೋರಿಕತ್ತಲೊಳಗೆ,
ಕರ್ತ, ನೀನು ಶೇರಲೆ
ಮರಣಾಂಧಕಾರವು
ಪರಿಹಾರವಾಯಿತು.

೫. ಯೇಸು, ನಿನ್ನ ದೇಹವು
ಆತ್ಮಾಹಾರವಾದದು;
ನಿನ್ನ ರಕ್ತ, ಕ್ರಿಸ್ತನೆ,
ಜೀವಪಾನ ನಮಗೆ.

೬. ಪ್ರೀತಿ ನಿನ್ನ ಗುಣವು,
ನಿನ್ನ ಕೃತ್ಯ ನೀತಿಯು;
ತ್ರಾಣ ನಿನ್ನ ಆಜ್ಞೆಯು,
ನಿನ್ನ ವಾಕ್ಯ ಪ್ರಾಣವು.

೭. ಯೇಸು, ನನಗೊಲಿದು,
ನನ್ನ ಪಾಪ ಬಿಡಿಸು!
ನನ್ನ ಹೃದದೊಳಗೆ
ಮೂಡಿ, ಆಳು, ಸೂರ್ಯನೆ!

೮. ಆಗ ನಿನ್ನ ಪ್ರೀತಿಯು
ನನ್ನ ಕ್ಷೇಮವಹುದು;
ನಿನ್ನ ದಿವ್ಯ ಜ್ಞಾನವು
ಅಹುದಾತ್ಮಜ್ಯೋತಿಯು.

೯. ನನ್ನ ಯೇಸು ಕ್ರಿಸ್ತನೆ,
ನಿನ್ನ ಸ್ತೋತ್ರ ಹಾಡುವೆ.
ನಿನ್ನ ದಯೆ ನನಗೆ
ಅತಿಹಿತವಾಗಿದೆ!



## ೧೮.

Mel. Meinen Jesum lass ich nicht. 58. 7. 8. 33. 55. 93.

೧. ನನ್ನ ಯೇಸುವಗಲೆ.
ಆತ ಸತ್ತ ನನಗಾಗಿ.
ಎಡೆ ಬಿಡದಾತಗೆ
ಅಟ್ಟುತೇನೆ ಸ್ಥಿರವಾಗಿ.
ಆತ ಜೀವಜ್ಯೋತಿಯೆ!
ನನ್ನ ಯೇಸುವಗಲೆ.

೨. ನನ್ನ ಯೇಸುವಗಲೆ.
ನನ್ನ ಆಸ್ತಿ, ನನ್ನ ಪ್ರಾಣ
ವಶ ಕೊಟ್ಟೆನಾತಗೆ;
ಆತ ನನ್ನ ಸಮಾಧಾನ.
ನಾನು ಇರ್ವ ವರೆಗೆ
ನನ್ನ ಯೇಸುವಗಲೆ.

೩. ಇಂದ್ರಿಯಂಗಳೊಳಗೆ
ತ್ರಾಣಧಾತು ಇಲ್ಲವಾಗಿ,
ನನ್ನ ಅಂತ್ಯ ದಿನಕೆ
ಸೂರ್ಯ ಮೂಡಿ ಬರಲಾಗಿ,
ಜೀವ ಪೋಪ ಕಾಲವೆ
ನನ್ನ ಯೇಸುವಗಲೆ.

೪. ಸದ್ವಿಶ್ವಾಸ ಮಹಿಮೆ
ಕಾಣುವಂಥ ಸ್ಥಳ ಶೇರಿ,
ತಂದೆಬಲಪಾರ್ಶ್ವಕೆ
ಯೇಸು ಕೂತ ಪೀಠಕೇರಿ,
ಆತನಲ್ಲಿ ಹರ್ಷಿಪೆ.
ನನ್ನ ಯೇಸುವಗಲೆ.

೫. ಮಾಯೆ, ಡಂಭಮಹಿಮೆ
ನನಗೇನು ಹಿತವಲ್ಲ;
ಸತ್ತು ಎದ್ದ ಯೇಸುವೆ
ಶ್ರೇಷ್ಠ ತೃಪ್ತಿ ಮಾಡ ಬಲ್ಲ.
ನನ್ನ ಮಿತ್ರನಾತನೆ!
ನನ್ನ ಯೇಸುವಗಲೆ.

೬. ನನ್ನ ಯೇಸುವಗಲೆ.
ಇರ್ವೆನಾತನೈಕ್ಯದಲ್ಲಿ;
ಆತನಿಂದ ಕುಡಿವೆ
ಜೀವಜಲಧೊಳೆಯಲ್ಲಿ.
ಒಪ್ಪಿ ಕೊಳ್ಳಿ, ಭ್ರಾತರೆ!
ನನ್ನ ಯೇಸುವಗಲೆ.

## ೧೯.

Mel. Meinen Jesum ich erwähle. 121.

೧. ನನ್ನ ಯೇಸುವಾದು
ಕೊಂಡೆ;
ಆತನತಿಪ್ರಿಯನೇ.
ಆತನಲ್ಲಿ ಹರ್ಷ ಗೊಂಡೆ;
ಆತ ಜೀವಜ್ಯೋತಿಯೇ.
ನನ್ನ ಆತ್ಮದಾಪ್ತನೆ,
ಯೇಸುವೆ,
ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

೨. ನನ್ನ ಯೇಸುವಾದು
ಕೊಂಡೆ;
ಕ್ರಿಸ್ತಮೃತಿಯಿಂದಲೆ
ಪಾಪಪರಿಹಾರ ಗೊಂಡೆ;
ಭಯವಿಲ್ಲ ನನಗೆ.
ನನ್ನ ಆತ್ಮದಾಪ್ತನೆ,
ಯೇಸುವೆ
ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

೩. ನನ್ನ ಯೇಸುವಾದು
ಕೊಂಡೆ;
ಆತ ಪರಿಶುದ್ಧನೆ;
ಬಹು ಆತ್ಮದಾಹ ಗೊಂಡೆ
ರಕ್ಷಾಕರ್ತನೈಕ್ಯಕೆ.
ನನ್ನ ಆತ್ಮದಾಪ್ತನೆ,
ಯೇಸುವೆ,
ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

೪. ನನ್ನ ಯೇಸುವಾದು
ಕೊಂಡೆ;
ಆತ್ಮ ಒಪ್ಪಿಸ್ಯಾತಗೆ,
ಸಾಯಲಿಕ್ಕೆ ಕಾಂಕ್ಷೆ ಗೊಂಡೆ;
ಆತನೆನ್ನ ಬಿಡೊನೆ?
ನನ್ನ ಆತ್ಮದಾಪ್ತನೆ,
ಯೇಸುವೆ,
ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

೫. ನನ್ನ ಯೇಸುವಾದು
ಕೊಂಡೆ;
ಆತನಲ್ಲಿ ನಂಬಿಕೆ
ಇಟ್ಟು, ಮೃತಿಂಜಯ ಗೊಂಡೆ;
ಮೇಲ್ವಿಶ್ರಾಂತಿ ಶೇರುವೆ.
ನನ್ನ ಆತ್ಮದಾಪ್ತನೆ,
ಯೇಸುವೆ,
ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

## ೨೦.

Mel. In meines Herzens Grunde. 155. 4. 30.

೧. ನನ್ನೆದೆಗುಂಡಿಯಲ್ಲಿ
ನಿನ್ ನಾಮ ಮಾತ್ರವೆ,
ಐ, ಹಗಲಿರುಳಲ್ಲಿ
ಥಳ್ಥಳಿಸುತ್ತದೆ.
ಓ ಯೇಸು, ನಿನ್ನ ರಕ್ತ
ನನ್ನಾತ್ಮತೃಪ್ತಿಯು!
ನಿಂಗೆಂದು ನಾನಾಸಕ್ತ
ಆಳಾಗಿ ಇರ್ವೆನು.

೨. ನಾಮಾಧಿನಾಮ ಯೇಸು,
ಅಪ್ರತಿನಾಮವೇ;
ನೀನಿರೆ, ಎಲ್ಲ ಲೇಸು;
ನಿನ್ ಹೊರ್ತುಜ ಚಿಂತೆಯೇ!
ನಿನ್ನನ್ನು ನಂಬೊ ತಾಪಿ
ಸುಕ್ಷೇಮ ಶಾಲಿಯು;
ನಿನ್ನನ್ನು ಹೇಳ್ವ ಪಾಪಿ
ವಿಮುಕ್ತನಾಹನು.

೩. ಬೇರೊಂದು ಹೆಸರಿಂದ
ಸಂರಕ್ಷೆಯಿಲ್ಲವು;
ಬೇರೊಂದು ಬೀಜದಿಂದ
ಸಂಜೀವನಾಗದು.
ಈ ಬೀಜ ಮಾತ್ರದಲ್ಲೆ
ಅನಂತ ಶಕ್ತಿಯು;
ಈ ಹೆಸರೊಂದರಲ್ಲೆ
ಅನಂತ ಸೌಖ್ಯವು!

೪. ಕುಶಾಪಗ್ರಸ್ತನಾದ
ನಾನೀಗ ಮುಕ್ತನೇ!
ನರ್ಕಾಗ್ನಿಬಂಧುವಾದ
ನಾನೀಶಶಿಶುವೇ!
ನನ್ನೆದೆಕತ್ತಲಲ್ಲಿ
ಈ ಯೇಸುಹೆಸರು
ಅಪಾರ ತೇಜದಲ್ಲಿ
ತೋರೋದು ನಿತ್ಯಕು!

---

## ೨೧.

Mel. Wenn ich ihn nur habe. 101.

೧. ನಾನು ಯೇಸುವನ್ನು
ಹಿಡಿದಿರಲೆ,
ನನ್ನ ಹೃದವಾತನನ್ನು
ಎಂದು ಮರ್ಯದಿದ್ದರೆ,
ಹೋಗೊದೆಲ್ಲ ದುಃಖ;
ತಪ್ಪದೆಂದು ಭಕ್ತಿ, ಪ್ರೀತಿ,
ಸುಖ.

೨. ನನ್ನ ಕರ್ತ ಮಾತ್ರ

ನನಗಿದ್ದರೆ,
ಇಹಭೋಗವೆಂಬ ಯಾತ್ರ
ನನಗಿನ್ನು ಯಾತಕೆ?
ಇಕ್ಕಟ್ಟಾದ ದ್ವಾರ
ಶೇರಿದವ ಭೋಗಮಾಡಲಾರ.

೩. ಆತನಿರುವಲ್ಲಿ
ನನ್ನ ಸ್ಥಾನವು;
ಆತನೀಯ್ವ ವರದಲ್ಲಿ
ಪೂರ್ಣ ತೃಪ್ತಿ ತಪ್ಪದು.
ಓ ಮಹಾ ಸಂತೋಷ!
ಆತನಲ್ಲಿ ನಿತ್ಯ ಆತ್ಮಪೋಷ.



## ೨೨.

Mel. Lobt Gott ihr Christen alle gleich. 43. 114. 127. 129.

೧. ನಾನ್ ಊರು, ಗ್ರಾಮ, ವಿಷಯ
ಸಂಚಾರ ಮಾಡಲು,
ಯೆರೂಸಲೇಮು ನಗರ,
ನಿನ್ ನೆನಪಿಹುದು!

೨. ಪವಿತ್ರ ನಿನ್ನ ಕಾಂತಿಯು
ಹೃದ್ದೃಷ್ಟಿಪ್ರಿಯವೆ!
ಓ ಪಟ್ಟರಾಣಿ, ನಿನ್ನನು
ನಾನೆಂದು ಮರೆಯೆ.

೩. ಓ ದೇವಪ್ರತಿಕಾಂತಿಯ
ಕಂಡಚಲಂಗಳೇ,
ನಿಮ್ಮನ್ನು ಏರಿ ನೋಡುವ
ಸಂತೋಷ ದೊಡ್ಡದೇ!

೪. ಚೆಲೋದು ನಿನ್ನ ತೀರವು
ಗೆನೇಜರೇಥುವೇ!
ಆ ಘನವುಳ್ಳ ಕರ್ಮೆಲು
ಸೌಂದರ್ಯವಾದದೇ!

೫. ಆ ಹಿಮವಂತ ಹೆರ್ಮೋನು,
ಗಿಲ್ಯಾದು, ಯೆರಿಖೋ
ಬೆಥ್ಲೇಮ ಬೈಲು, ಕಾನವು
ಕಣ್ಗಿಂಪು ಅಲ್ಲವೋ?

೬. ಆದಾಗ್ಯು ಒಂದೆ ಶ್ರೇಷ್ಠವು
ಸಮಸ್ತ ಸ್ಥಳಕೆ;
ಆ ಚೀಯೋನ್ ಚಿನ್ನಕೋಟೆಯು
ಅತುಲ್ಯವೆನಗೆ!

೭. ಓ ರಮ್ಯ ಇಪ್ಪೆಗುಡ್ಡವೇ,
ಓ ಇಷ್ಟ ಗೊಲ್ಗಥ,
ನಿಮ್ಮಲ್ಲಿ ಹುಟ್ಟಿ ಬಂತಲೇ
ಜಗತ್ಸಂಜೀವನ!



## ೨೩.

C. M. Thou art the way; to Thee alone. 129. 43. 114. 127.

೧. ನೀ ಮಾರ್ಗ, ಕರ್ತ, ನಿ
ನ್ನಲಿ
ಆಶ್ರಯ ಗೊಂಡೆವು;
ನಿನ್ ಹೊರ್ತು ತಂದೆಯೆಡೆಗೆ
ಯಾರೊಬ್ಬ ಬಾರನು.

೨. ನೀ ಸತ್ಯ; ನಿನ್ನ ವಾಕ್ಯವು
ಜ್ಞಾನೋಪದೇಶವು;
ಸುಬುದ್ಧಿ, ಶುದ್ಧ ಮನಸು
ನಿನ್ನಿಂದ ಬಪ್ಪುದು.

೩. ನೀ ಜೀವ; ಗೋರಿ ಒಡೆದು
ಸಾವನ್ನು ಜೈಸಿದಿ;
ನಿನ್ನನ್ನು ನಂಬಿದವನು
ಇನ್ನ್ಯಾತಕಂಜಲಿ!

೪. ನೀ ಮಾರ್ಗ, ಸತ್ಯ, ಜೀ
ವವು;
ಸನ್ಮಾರ್ಗ ತೋರಿಸಿ,
ಸುಶಿಕ್ಷೆ ಕೊಟ್ಟು, ಶೇರಿಸು
ನಮ್ಮನ್ನು ಜೀವದಿ!



## ೨೪.

Mel. Brüder streuet guten Samen. 66.

೧. ಪಾಪ, ಶಾಪ, ಪೀಡೆ
ಯನ್ನು
ಹೊತ್ತು, ಪ್ರಿಯ ಯೇಸುವು
ಕ್ರೂಜೆಯಲ್ಲಿ ಜೀವವನ್ನು
ನಮಗಾಗಿ ಬಿಟ್ಟನು.
ತೆತ್ತನಾತ ನಮ್ಮ ಸಾಲವನ್ನು;
ತಂದು ಕೊಟ್ಟನಾತ ದೇವಪ್ರೀ
ತಿಯನ್ನು.

೨. ನಿನ್ನ ಶ್ರಮದಿಷ್ಟ ಫಲ
ನಮ್ಮ ನಿತ್ಯ ಶಾಂತಿಯೆ;
ಸೌಖ್ಯವಾದ ವಾಸಸ್ಥಲ
ನೀನು ಕೊಟ್ಟೆ ನಮಗೆ.
ಪ್ರಿಯ ಕರ್ತ, ನಿನ್ನ ಪಾದಸೇವೆ
ಪೂರ್ಣ ಮನದಿಂದ ಮಾಡು
ತೇವೆ!



## ೨೫.

Mel. Seelenbräutigam. 29. 35. 36.

೧. ಪ್ರಿಯ ರಕ್ಷಕಾ,
ಕೃಪೆಯಿಂದ ಬಾ!

ಪಾಪದಲ್ಲಿ ಬಿದ್ದಿದ್ದೇವೆ;
ಧೂಳಿಯಲ್ಲಿ ಮುಳ್ಗುತೇವೆ.
ಕರ್ತ, ನಮ್ಮನು
ಶಾಂತಿ ಪಡಿಸು!

೨. ನಮ್ಮ ಸ್ಥಳದಿ
ಶಾಪ ಸೈರಿಸಿ,
ಮೃತಿಯನ್ನು ತಾಳಿ, ಎದ್ದಿ;
ಕ್ರೂರ ಯುದ್ಧದಲ್ಲಿ ಗೆದ್ದಿ.
ಕೊಡು, ಶೂರನೆ,
ಜಯವೆಮಗೆ!



## ೨೬.

Mel. Liebe die du mich zum Bilde. 139. 62.

೧. ಪ್ರೀತಿ, ದಿವ್ಯ ರೂಪವಾಗಿ
ನನ್ನ ನೀನು ನಿರ್ಮಿಸಿ,
ಪ್ರೀತಿ, ಪೂರ್ಣ ಕೃಪೆಯಾಗಿ,
ಬಿದ್ದ ನನ್ನನೆತ್ತಿದಿ!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

೨. ನೀನು ನನ್ನನಾದಿಯಿಂದ
ಆದು ಕೊಂಡಿ, ಪ್ರೀತಿಯೆ;
ಪ್ರೀತಿ, ಬಂದು ದಿವದಿಂದ,
ನನ್ನ ಹಾಗೆ ಹುಟ್ಟಿದೆ!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

೩. ಪ್ರೀತಿ, ನೀನು ಕ್ರೂಜಿ
ಯಲ್ಲಿ
ಸತ್ತೆ ನನಗಾಗಿಯೆ;
ಪ್ರೀತಿ, ನೀನು ಯುದ್ಧದಲ್ಲಿ
ನನಗಾಗಿ ಕಾದಿದೆ!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

೪. ಪ್ರೀತಿ, ನೀನೆ ಸತ್ವ, ತ್ರಾಣ,
ಆತ್ಮ, ಜೀವ, ಬೆಳಕು;
ಪ್ರೀತಿ, ನಂಗೆ ನಿನ್ನ ಪ್ರಾಣ
ಪಾಪಬಲಿಯಾಯಿತು!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

೫. ಪ್ರೀತಿ, ನಿನ್ನ ನೊಗವನ್ನು
ಎಂದು ಹೊತ್ತು ಕೊಂಬೆನು;
ಪ್ರೀತಿ, ನನ್ನ ಎದೆಯನ್ನು
ಪ್ರೇಮಭ್ರಾಂತಿ ಬಿಡದು!
ಪ್ರೀತಿ ಸರ್ವ ಕಾಲಕೆ
ದಾಸನಾದೆ ನಿನಗೆ!

೬. ಪ್ರೀತಿ, ನನ್ನ ಪ್ರಾಣಕಾಗಿ

ಎಷ್ಟೊ ಶ್ರಮ ತಾಳಿದಿ!
ಪ್ರೀತಿ, ಮಧ್ಯಸ್ಥನೆ ಆಗಿ,
ನನಗಾಗಿ ಬೇಡುತಿ!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

೭. ಪ್ರೀತಿ, ನೀ ಸಮಾಧಿ ಬಿಟ್ಟು
ಏಳ ಹೇಳಲೆನಗೆ,
ಜೀವಮಾಲೆಯೆನಗಿಟ್ಟು
ಕೊಟ್ಟ ನಿನಗೆರ್ಗುವೆ!
ಪ್ರೀತಿ, ಸರ್ವ ಕಾಲಕೆ
ದಾಸನಾದೆ ನಿನಗೆ!

## ೨೭.

Mel. Meinen Jesum lass ich nicht. 58. 7. 8. 33. 55. 93.

೧. ಯೇಸು ಕ್ರಿಸ್ತ, ನಿನಗೆ
ನಿತ್ಯ ಘನ ಕೊಡುತೇವೆ;
ನಿನ್ನ ಕೃಪೆಯಿಂದಲೆ
ನಿನ್ನ ಪ್ರಜೆಯಾಗಿದ್ಧೇವೆ!
ನೀನು ಇಹಪರಕೆ
ನಮ್ಮ ಗತಿ, ಯೇಸುವೆ!

೨. ನಮ್ಮ ಕಷ್ಟ ತಿಳಿದು,
ದೇವಸನ್ನಿಧಾನ ಬಿಟ್ಟೆ;
ನಮ್ಮ ದ್ವೇಷವರಿತು,
ನಮ್ಮ ಮೇಲೆ ಪ್ರೀತಿ ಇಟ್ಟೆ;
ಆದಿತೇಜ ತ್ಯಜಿಸಿ,
ನರನಾಗಿ ಹುಟ್ಟಿದಿ.

೩. ನಮ್ಮ ಪಾಪರಾಶಿಗೆ
ಪ್ರಾಯಶ್ಚಿತ್ತ ಮಾಡ ಬಂದಿ;
ಮೃತ್ಯುವಶ ಜನಕೆ
ಹೊಸ ಜೀವವನ್ನು ತಂದಿ;
ನಮ್ಮ ಶಾಪ ಧರಿಸಿ,
ನಿನ್ನ ರಕ್ತ ಚಲ್ಲಿದಿ.

೪ ನೀನು ಸತ್ತು ಜೈಸಿದಿ
ಕ್ರೂರ ಮೃತಿರಾಜನನ್ನು;
ನಿನ್ನ ಜೀವವರ್ಪಿಸಿ
ಕೊಂಡು ಕೊಂಡಿ ಕ್ಷೇಮವನ್ನು
ಪಾಪಬದ್ಧ ವಂಶಕೆ.
ನಿನ್ನ ಪ್ರೀತಿ ದೊಡ್ಡದೆ!

೫. ಹೊಸಿಯನ್ನ, ಯೇಸುವೆ,
ಕ್ಷಣ ಮಾತ್ರ ಸೋತು, ಗೆದ್ದಿ!
ಭೂಮಿಗರ್ಭದೊಳಗೆ
ಇಳಿದೋಜದಿಂದ ಎದ್ದಿ.
ಈಗ ಶ್ರೇಷ್ಠ ಪೀಠದಿ
ಕೂತು ರಾಜ್ಯವಾಳುತಿ.

೬. ಕ್ರಿಸ್ತ, ನೀನು ಮರಳಿ
ಚೀಯೋನಲ್ಲಿ ಶೇರುವಾಗ
ನಿತ್ಯ ರಾಜ್ಯ ಸ್ಥಾಪಿಸಿ,
ತೇಜಪೀಠವೇರಲಾಗ
ನಿನಗೆಲ್ಲ ಲೋಕವು
ನಮಸ್ಕಾರ ಮಾಡೊದು.

೭. ಈಗ ನಾವು ನಿನಗೆ
ನಂಬಿ ಘನ ಕೊಡುತೇವೆ;
ನಿನ್ನ ಕೃಪೆಯಿಂದಲೆ
ನಿನ್ನ ಪ್ರಜೆಯಾಗಿದ್ದೇವೆ.
ನೀನು ಇಹಪರಕೆ
ನಮ್ಮ ಗತಿ, ಯೇಸುವೆ!

## ೨೮.

Mel. Gott sei Dank in aller Welt. 12. 19. 21. 61.

೧. ಯೇಸು ಕ್ರಿಸ್ತನುತ್ತಮ
ತ್ರಾಣವುಳ್ಳ ಕುರುಬ;
ಯೇಸುವಿನ ಮುಂದೆಯು
ಭದ್ರವಾಗಿರುವದು.

೨ ಯೇಸುಪತಿಕುರಿಗೆ
ಹಶಿ ಮೇವು ಊಟಕೆ,
ಶುದ್ಧ ನೀರು ಪಾನಕೆ
ಎಂದು ದೊರಕುತದೆ.

೩. ಒಂದೆ ಬಡ ಕುರಿಯು
ಮಾರ್ಗ ತಪ್ಪಿ ಹೋಗಲು,
ಅದು ಶಿಕ್ಕುವನಕ
ಬಿಡನೊಳ್ಳೆ ಕುರುಬ.

೪. ಲೋಕಕಾಡಿನೊಳಗೆ
ಮಂದೆ ಪಾಲಿಸೇಸುವೆ!
ನಾನು ಬಡ ಕುರಿಯು;
ನನ್ನ ಆತ್ಮ ಹುಡುಕು.

## ೨೯.

Mel. Himmel, Erde, Luft und Meer. 61. 12. 19. 21.

೧. ಯೇಸು ನಮ್ಮ ದೇವರು;
ತಕ್ಕ ಸ್ತೋತ್ರ ಹಾಡಿರಿ!
ಆತ ನಮ್ಮ ಕರ್ತನು;
ಸತ್ಯ ಸೇವೆ ಆಗಲಿ!

೨. ಯೇಸು ನಮ್ಮ ಗುರುವು;
ಶ್ರೇಷ್ಠ ಐಯ್ಯನಾತನೇ.
ಯೇಸುವಿನ ಶಿಕ್ಷೆಯು
ನಮ್ಮ ನಿತ್ಯ ಜೀವವೇ.

೩. ಯೇಸು ನಮ್ಮ ರಕ್ಷಕ;
ಆತ ಪ್ರೀತಿಪೂರ್ತಿಯು;

ಆತ ಪಟ್ಟ ಮರಣ
ಪ್ರಾಯಶ್ಚಿತ್ತಮೂಲವು.

**೪.** ಯೇಸು ನಮ್ಮ ಮಿತ್ರನು.
ಯೇಸುವನ್ನು ಸ್ನೇಹಿಸಿ,
ಜೀವವಿರೊ ವರೆಗು
ನಂಬಿ, ದೃಢ ನಿಲ್ಲಿರಿ!



## ೩೦.

Mel. Weil ich Jesu Schäflein bin. 104.

**೧.** ಯೇಸುವಿನ ಕುರಿಯು
ನಾನು; ಚಿಂತೆ ಪಡೆನು.
ನನಗೆಂದಿಗೂ ಸಂತೋಷ;
ಪ್ರೀತಿಯಿಂದ ಒಳ್ಳೆ ಪೋಷ
ಕೊಟ್ಟು ಕಾಯ್ವ ಯೇಸುವು
ನನ್ನ ನಾಮ ಬಲ್ಲನು.

**೨.** ಶಾಂತ ಕೋಲು ಹಿಡಿದು
ನಡಿಸೋನು ನನ್ನನು;
ಸುಖಕ್ಷೇಮದಲ್ಲಿದ್ಧೇನೆ,
ಶ್ರೇಷ್ಠ ಮೇವು ಮೆಲ್ಲುತೇನೆ;
ದಾಹವಾಗೆ, ಕುರುಬ
ತೋರಿಸೋನು ಬುಗ್ಗೆಯ.

**೩.** ಸುಖಿಯಾದ ಕುರಿಗೆ
ಹೃತ್ಸಂತೋಷವಿರದೆ?
ಈ ಸುಕಾಲದಂತ್ಯದಲ್ಲಿ
ಆತ ಸ್ವಂತ ಹೆಗಲಲ್ಲಿ
ಮನೆಗೆನ್ನನೊಯ್ಯಲು,
ಸುಖ ಪೂರ್ತಿ ಅಹುದು.



## ೩೧.

Mel. Jesus, refuge of my soul. 108.

**೧.** ಯೇಸು, ನಿನ್ನ ಪಾದವೆ
ನನ್ನ ಆತ್ಮಸ್ಥಾನವು!
ಲೋಕದಬ್ಧಿಘೋಷಕೆ
ಅತಿಭಯ ಪಟ್ಟೆನು;
ನಿನ್ನ ಕೈಯ, ಯೇಸುವೆ,
ಚಾಚಿ, ನನ್ನ ಸಲುಹು!
ಅಂತ್ಯದಲ್ಲಿ ರೇವಿಗೆ
ನನ್ನ ದೋಣಿ ಶೇರಿಸು!

**೨.** ನೀನೆ ಸಾಕು, ಕರ್ತನೆ!
ನಿನ್ನಲೆಲ್ಲ ಶಿಕ್ಕಿತು.
ಕ್ಷೇಮ ಕೊಡು ರೋಗಿಗೆ!
ಕುರ್ಡನನ್ನು ನಡಿಸು!
ಪಾಪದಿಂದ ತುಂಬಿದೆ,
ನೀನೆ ಪರಿಶುದ್ಧನು;
ಮಲ ಹತ್ತಿತೆನಗೆ,
ನೀನೆ ಕೃಪಾಪೂರ್ತಿಯು.

**೩.** ನನ್ನ ಪಾಪವೆಲ್ಲವ
ಮನ್ನಿಸನುಗ್ರಹದಿ;
ನನಗಾತ್ಮಶುದ್ಧಿಯ
ನಿನ್ನ ಆತ್ಮ ಕೊಡಲಿ!
ನಿನ್ನ ಜೀವಜಲವು
ಪ್ರಾಪ್ತವಾಗಲೆನಗೆ!
ನಿತ್ಯವಾದ ಸ್ತುತಿಯು
ನಿನಗೆನ್ನ ಕರ್ತನೆ!



## ೩೨.

Mel. Seelenbräutigam.
29. 35. 36.

**೧.** ಶಾಂತ ಯೇಸುವೇ,
ನಿನ್ನ ಹಾಗೆಯೇ
ಯಾರು ಸರ್ವ ಲೋಕದಲ್ಲಿ?
ಎಲ್ಲ ನರಪುತ್ರರಲ್ಲಿ
ಅತಿಶ್ರೇಷ್ಠನೇ,
ಶಾಂತ ಯೇಸುವೇ!

**೨.** ನನ್ನ ಸಾಲವು
ಪೀಡೆ ಕೊಡಲು,
ನೀನು ದೊಡ್ಡ ಪ್ರೀತಿಯಿಂದ
ನನ್ನನೆಲ್ಲ ದೋಷದಿಂದ,
ಸಾಲ ಸಲ್ಲಿಸಿ,
ಶುದ್ಧ ಮಾಡಿದಿ.

**೩.** ಆದಿತೇಜವೇ,
ಪ್ರೀತಿಯಿಂದಲೇ
ನರರಲ್ಲಿ ನರನಾಗಿ
ನೀಚ ಶತ್ರುಜನಕಾಗಿ
ಬಲಿ ಅರ್ಪಿಸಿ,
ಪ್ರಾಣ ಚಲ್ಲಿದಿ!

**೪.** ದಿವ್ಯ ಶೂರನೆ,
ಮೃತಿಯೊಳಗೆ
ಶೇರಿ, ದುಷ್ಟ ಶತ್ರುವನ್ನು
ಜೈಸಿ, ನಮ್ಮ ಶಿಕ್ಷೆಯನ್ನು
ಅನುಭವಿಸಿ,
ಮೇಲಕೇರಿದಿ!

**೫.** ಓ ಪ್ರವಾದಿಯೇ,
ಸರ್ವರಾಜನೇ!
ನಿನ್ನ ಚಿತ್ತಕೊಪ್ಪುತೇನೆ;
ನಿನ್ನ ಶಿಷ್ಯನಾಗಿದ್ಧೇನೆ.
ನಿನ್ನ ಪಾದವೆ
ಗತಿ ನನಗೆ!



## ೩೩.

Mel. Schönster Herr Jesu. 159.

**೧.** ಸುಂದರ ಯೇಸು!
ಸರ್ವಲೋಕಕರ್ತ!

ದೇವನಾರಿಪುತ್ರನೆ!
ಆತ್ಮದ ಮುದ!
ಆತ್ಮಕಿರೀಟ!
ನಿನ್ನನು ಪ್ರೀತಿ ಮಾಡುವೆ.

೨. ಹೊಳ್ಪದು ನಾಡು,
ಹೊಳ್ಪದಿನ್ನು ಕಾಡು,
ಚೈತ್ರಮಾಸ ಬಂದರೆ;
ಅಧಿಕ ಹೊಳ್ಪು,
ಅಧಿಕ ಶುಚಿ
ಶಾಂತಿದ ಯೇಸುವಲ್ಲಿಯೆ!

೩. ಸೂರ್ಯನು ಚಂದ,
ಚಂದ್ರಕಾಂತಿ ರಮ್ಯ,
ಮಿಂಚೊದುಡುರಾಸಿಯು;
ಯೇಸುವ ಶುದ್ಧ
ತೇಜಸಿನಲ್ಲಿ
ಬೆಳ್ಕಿಗು ಬೆಳಕಿಲ್ಲವು.

---

# III. ಸಭೆಯ ಹಬ್ಬಗಳಿಗೆ ತಕ್ಕ ಗೀತಗಳು.

## a. ಕ್ರಿಸ್ತನ ಆಗವುನವು.

### ೩೪.

Mel. Valet will ich dir geben. 4. 33. 155.

೧. ಓ ಕರ್ತ, ನಿನ್ನ ಪ್ರೀತಿ
ಜಗತ್ಪ್ರತೀಕ್ಷೆಯು;
ನನ್ನಲ್ಲಿ ನಿನ್ನ ನೀತಿ-
ಯಪೇಕ್ಷೆ ದೊಡ್ಡದು.
ನಿನ್ನತಿಶಯ ಜ್ಞಾನ
ನನ್ನೊಳ್ಗೆ ಮೂಡಲೆ
ಸಂತೋಷದಿಂದ ಮಾನ
ನಿಂಗೈಯ್ಯ ಕೊಡುವೆ.

೨. ನೀ ಪಾಪಬಂಧದಿಂದ
ನನ್ನನ್ನು ಬಿಡಿಸಿ,
ಅಗಾಧ ಕೇಡಿನಿಂದ
ವಿಮುಕ್ತಿ ಮಾಡಿದಿ.
ನಿರ್ದೋಷನೀತಿಯನ್ನು
ನಿನ್ನಿಂದ ಪಡೆದೆ;
ಅನಂತ ಜೀವವನ್ನು
ನಿನ್ನಿಂದ ಹೊಂದುವೆ.

೩. ಓ ಪಾಪಿ, ನಿನ್ನ ಪಾಪ
ಅಸಹ್ಯವಾದರೆ,

ಹೃದಂತರಂಗತಾಪ
ಹೆಚ್ಚಾಗಿ ಹೆಚ್ಚಲೆ,
ದಯಾಳು ಕರ್ತನನ್ನು
ಘಟ್ಟ್ಯಾಗಿ ಪ್ರಾರ್ಥಿಸು!
ನಿನ್ನೆಲ್ಲ ಕಷ್ಟವನ್ನು
ಯೆಹೋವನೊಯ್ವನು.

## b. ಕ್ರಿಸ್ತನ ಜನನ.

### ೩೫.

Mel. Vom Himmel hoch, da komm ich her. 132. 24. 44. 45. 131.

೧. "ಆಕಾಶದಿಂದ ಬಂದೆನು,
ಸುವರ್ತಮಾನ ತಂದೆನು;
ನಾ ಸಾರುವೀ ಸುವಾರ್ತೆಯು
ವಿಶೇಷವಾಗಿ ದೊಡ್ಡದು."

೨. "ಕನ್ಯಾಸ್ತ್ರೀಯಿಂದ ನಿಮಗೆ
ಈ ಹೊತ್ತು ಕೂಸು ಹುಟ್ಟ್ಯದೆ,
ಸೌಂದರ್ಯವಾದ ಮಗುವು;
ಅದಾತ್ಮತೃಪ್ತಿಮೂಲವು."

೩. "ಅದಾರು? ಕ್ರಿಸ್ತ ಯೇಸುವು,
ಪರಾತ್ಪರೈಕಪುತ್ರನು;
ಸಮಸ್ತಪಾಪಕಷ್ಟವ
ಕೊಂಡ್ಹೋಗುವಂಥ ರಕ್ಷಕ."

೪. "ಸೌಭಾಗ್ಯ ನಿಮಗೋಸ್ಕರ
ಯೆಹೋವ ಸಿದ್ಧ ಮಾಡಿದ;
ನಮ್ಮಂತೆ ನೀವು ದಿವದಿ
ಬಂದೆಂದು ಬಾಳುತಿರ್ವಿರಿ."

೫. "ತತ್ಸಂಜ್ಞೆಯನ್ನು ನೋಡಿರಿ!
ಆ ಬಟ್ಟೆಯುಳ್ಳ ಗೋದಲಿ!
ಸಮಸ್ತ ಲೋಕದೊಡೆಯ
ಅಲ್ಲ್ಯವತಾರ ಮಾಡಿದ."—

೬. ನಾವೀಗಲೆದ್ದು, ಕುರ್ಬರ
ಹಿಂದಟ್ಟಿ, ಅಲ್ಲಿಘೋಗುವ!
ಆಶ್ಚರ್ಯವನ್ನು ಕಾಣ್ಬರೆ
ನಮ್ಮೊಳಗಿಚ್ಛೆ ಇರದೆ?

೭. ಚನ್ನಾಗಿ ನೋಡು, ಮನವೆ!
ಆ ಗೋದಲೀಲಿ ಏನದೆ?

ಆ ಒಳ್ಳೆ ಕೂಸು ಯಾರದು?
ಅದತಿಪ್ರಿಯ ಯೇಸುವು.

**೮.** ಓ ಘನರಾಜ, ವಂದನೆ!
ನೀ ಪಾಪಿ ಬೇಡವೆನ್ನದೆ,
ನರಾವತಾರ ತೆಗದ್ದು
ಮಹಾಂತಪ್ರೇಮಸಾಕ್ಷಿಯು.

**೯.** ಓ ಸರ್ವ ಲೋಕದೊಡೆ
ಯ,
ಏನಾದಿ ನನಗೋಸ್ಕರ!
ರಾಜತ್ವಸ್ಥಾನವಗಲಿ,
ದೈನ್ಯತ್ವದಲ್ಲಿ ಸೇರಿದಿ.

**೧೦.** ಈ ಲೋಕವೆಲ್ಲ ರತ್ನ
ದ್ದು,
ಭಂಗಾರ ತುಂಬಿದ್ದಾದರು,
ಓ ದೇವಪುತ್ರ, ನಿನಗೆ
ಅದೇನು? ಬರೆ ಕಸವೆ!

**೧೧.** ಪ್ರಪಂಚಘನಮಹಿಮೆ
ಏನಿಲ್ಲ! ಎಂತ, ತೋರಿಸೆ,
ಓ ರಾಜ, ಗೋದ್ಲಿಹುಲ್ಲಲಿ
ನೀ ಮಲ್ಗಿ ಕೊಂಡು ಇರುತಿ.

**೧೨.** ಓ ಅತಿಪ್ರಿಯ ಮಗುವೆ,
ನಿವಾಸಿಸೆಮ್ಮ ಒಳಗೆ!
ನಿನ್ನನ್ನು ಮರ್ಯದೆಂದಿಗು
ಕೊಂಡಾಡಿ, ಹರ್ಷ ಗೊಂಬೆ
ನು.

**೧೩.** ಸ್ವಪುತ್ರನನ್ನು ನಮಗೆ
ಕೊಟ್ಟೊಡೆಯಂಗೆ ಮಹಿಮೆ!
ಸುಕಾಲ ಸುರುವಾಯಿತು;
ಜಗತ್ತೆ, ಸಲೆ ಸುಖಿಸು!



### ೩೬.

Mel. Vom Himmel hoch, da komm ich her. 132. 24. 44. 45. 130. 131.

**೧.** ಈಗಿಷ್ಟ ಜನರಕ್ಷಕ,
ಕೇಳ್, ಕನ್ಯೆಯಿಂದ ಹುಟ್ಟಿದ.
ಈ ಜನ್ಮ ಸರ್ವ ಲೋಕಕೆ
ಮಹಾ ಆಶ್ಚರ್ಯವಾದದೆ!

**೨.** ನರೇಚ್ಛೆಯಿಂದಲಲ್ಲದೆ
ದೇವಾತ್ಮಶಕ್ತಿಯಿಂದಲೆ
ಸರ್ವೋಚ್ಚ ದೇವವಾಕ್ಯವು
ಸ್ತ್ರೀಗರ್ಭಫಲವಾಯಿತು.

**೩.** ಕುಮಾರಿ ಬಸುರಾದರು,
ಕನ್ಯತ್ವ ತಪ್ಪಲಿಲ್ಲವು.
ಕೇಳ್, ಕನ್ಯೆಯಿಂದ ದೇವಜ
ಪವಿತ್ರನಾಗಿ ಹುಟ್ಟಿದ.

**೪.** ಆನಂದಸ್ಥಾನವಗಲಿ,

ಈ ಭೂಮಿಗವತರಿಸಿ,
ಕೃಪಾಳು ನಮ್ಮ ರಕ್ಷಕ
ನಮ್ಮೊಲು ಸಾವು ತಾಳಿದ.

೫. ದ್ಯುಲೋಕದಿಂದ ಹೊ
ರಟು,
ದ್ಯುಲೋಕಕೇರಿ ಹೋದನು;
ಪಾತಾಳಕಿಳಿದರಸು
ಮಹತ್ವದಲ್ಲಿ ಕೂತನು.

೬. ಓ ದಿವ್ಯ ಮಿತ್ರ, ಯೇ
ಸುವೇ,
ಪವಿತ್ರ ನರಪುತ್ರನೇ,
ಮನುಷ್ಯರಾದ ನಮ್ಮನು
ಮಹತ್ವದಲ್ಲಿ ಶೇರಿಸು!

---

## ೩೭.

Mel. Das ist unbeschreiblich. 74.

೧. ಒಂದು ಊರಿನಲ್ಲಿ
ಒಂದು ಬೆಳಕು
ಅಂಧಕಾರದಲ್ಲಿ
ತೋರಲಾಯಿತು.
ಬೆಥ್ಲೆಹೇಮಿನಲ್ಲಿ
ನೀತಿಸೂರ್ಯನು
ಪಾಪಕತ್ತಲಲ್ಲಿ
ಕಾಂತಿ ಹೊಯ್ದನು.

೨. "ದೇವರಿಂಗೆ ಮಾನ
ಊರ್ಧ್ವ ಲೋಕದಿ!
ನಿತ್ಯ ಸಮಾಧಾನ
ಭೂಮಿಗಿರಲಿ!"
ಎಂಬ ಗೀತವನ್ನು
ದೂತಸೇನೆಯು
ಹಾಡಿ, ಲೋಕವನ್ನು
ಹರಸಿದುದು.

೩. ಈಗ ನರರಲ್ಲಿ
ದಿವ್ಯ ಕೃಪೆಯು
ಎಲ್ಲ ಭೂಮಿಯಲ್ಲಿ
ದೊಡ್ಡದಾಯಿತು;
ಈಗ ಶುದ್ಧ ನೀತಿ,
ಸುಖಪ್ರಭೆಯು,
ಸತ್ಯವಾದ ಪ್ರೀತಿ
ನೆಲೆ ಗೊಂಡವು.

೪. ಬೆಥ್ಲೆಹೇಮಿನಲ್ಲಿ
ನಮ್ಮ ಯೇಸುವು
ಮರ್ತ್ಯ ರೂಪದಲ್ಲಿ
ಹುಟ್ಟುವಾಗಲು,
ಜೀವಸಂಪ್ರಕಾಶ
ಮೂಡಿ ತೋರಲು,
ಮೃತ್ಯುಕ್ರೂರಪಾಶ
ಬಿಚ್ಚಿ ಹೋಯಿತು.

## ೩೮.

Mel. Es ist ein' Ros' entsprungen. 158.

೧. ಕೋಮಲ ಬೇರಿನಿಂದ
ಶಾವಂತಿಪುಷ್ಪವು
ಆ ಯೆಸ್ಸೆಜಾತಿಯಿಂದ
ಉಕ್ತೇವ ಹುಟ್ಟಿತು;
ಹೊತ್ತೋದ ಇರ್ಳೊಳು
ಹೇಮಂತಕಾಲದಲ್ಲಿ
ಸುಪುಷ್ಪವರ್ಳಿತು.

೨. ಆ ಎಳೆ ಹೂವಿನಲ್ಲಿ
ಅತೀಷ್ಟ ವಾಸನೆ;
ಹೂಕದಿರಿರುಳಲ್ಲಿ
ಥಳಥಳಿಸುತ್ತದೆ.
ಸದ್ದೇವನರನೇ,
ಅರಿಷ್ಟರಿಂಗೆ ಗತಿ
ನಿನ್ನಡಿ ಮಾತ್ರವೇ!

೩. ಈ ಗೋಳುಹಳ್ಳದಿಂದ
ನಾವೇರುವನಕಾ
ಕಾಯ್ಯ ಎಮ್ಮನೊಲ್ಮೆಯಿಂದ,
ಓ ಯೇಸು, ಸರ್ವಥಾ!
ಎಂದೆಂದು ಸ್ತೋತ್ರವು
ನಿಂಗಿಹಪರದಲ್ಲಿ!
ಓ ದೇವ, ಸಲುಹು!

## ೩೯.

Mel. Gott wird ein Mensch. 9.

೧. ಬೇಥ್ಲೇಮ ದನಹಟ್ಟಿಯಲ್ಲಿ
ಮನುಷ್ಯಪುತ್ರ ಹುಟ್ಟಲು,
ಸಮಸ್ತ ದೇವದೂತರಲ್ಲಿ
ಮಹಾಂತ ಹರ್ಷವಾಯಿತು.
ರಾತ್ರೀಲಿ ದೊಡ್ಡ ಸೇನೆಯಾಗಿ
ಕುರುಬರೊಳ್ಗೆ ಕಾಣಲಾಗಿ
ಆ ದಿವ್ಯ ದೂತರು
ಪ್ರಕಾಶ ಕೊಟ್ಟದು;
"ಕರ್ತಂಗೆ ಊರ್ಧ್ವದಲ್ಲಿ ಮಾನ!
ಈ ಭೂಮಿಯಲ್ಲಿ ಸಮಾಧಾನ!
ಮನುಷ್ಯರೊಳಗೆ
ಆನಂದ!" ಎಂದರು.

೨. ಪಾಪಿಷ್ಠರಲ್ಲಿ ಪ್ರೀತಿ ಇಟ್ಟು,
ನಮ್ಮಲ್ಲಿ ಯೇಸು ಬಂದನು;
ಅತ್ಯುನ್ನತೀಯಸ್ಥಾನ ಬಿಟ್ಟು,
ಈ ಭೂಮಿಲೋಕಕಿಳಿದು,
ಸ್ವರಾಜ್ಯಸ್ಥಾಪನಾದಿ ಮಾಡಿ,
ಸೈತಾನನೊಡ ಹೋರನಾಡಿ,

ಅಘೋರ ಯುದ್ಧದಿ
ವಿಜಯ ಗೆದ್ದನು.
ಓಲಾಗಿ ಯೇಸು ಕ್ರೂಜೆಯಲ್ಲಿ
ಪವಿತ್ರ ರಕ್ತವನ್ನು ಚಲ್ಲಿ,
ಸತ್ತೆದ್ದನಾಗಲೆ
ಸಜೀವಪತಿಯು.

೩. ಓ ಯೇಸು, ಭಕ್ತರೊಳ್ಗೆ ಹುಟ್ಟಿ
ನಿವಾಸಿಯಾಗು ನಿತ್ಯಕು!
ಅಶುದ್ಧ ನನ್ನ ಹೃದ ಮುಟ್ಟಿ
ಕಳಂಕವೆಲ್ಲ ಬಿಡಿಸು!
ಕಾಪಾಡಿ ನಿನ್ನ ಸಭೆಯನ್ನು,
ಮಾಡೊಳ್ಳೆ ರಾಜ್ಯಭಾರವನ್ನು!
ಅಮಿತ್ರನಾಶಕೆ
ಸಹಾಯ ಕಳುಹು!
ನಿನ್ನಂತ್ಯ ಜಯದಿನದಲ್ಲಿ
ಮಹತ್ವವುಳ್ಳ ಪ್ರಭೆಯಲ್ಲಿ
ನಿನ್ನನ್ನು ಕಂಡರೆ
ಸಂತೋಷ ತೀರದು.



೪೦.

Mel. In dulci jubilo. 103.

೧. ಮಹಾ ಸಂತೋಷವೆ!
ಕೊಂಡಾಡಿರೆಲ್ಲರೆ!
ನಮ್ಮ ಹೃದಾನಂದ
ಈ ಹೊತ್ತು ಹುಟ್ಟಿದ್ದೆ!
ಸುಜ್ಞಾನಸೂರ್ಯ ಬಂದ
ಸಮಸ್ತ ಲೋಕಕೆ.
ಪ್ರಿಯ ಯೇಸುವೆ,
ನಿತ್ಯ ವಂದನೆ!

೨. ಓ ಶ್ರೇಷ್ಠ ಶಿಶುವೆ,
ಓ ಪ್ರಿಯ ಕರ್ತನೆ!
ಸತ್ಯಕ್ಷೇಮವನ್ನು
ಕೊಡ್ವೈಯ್ಯ ನನಗೆ!
ಓ, ಎಳೆ ದಾಸನನ್ನು
ನಿನ್ನಿಷ್ಟ ಪಾದಕೆ!
ಘನಪತಿಯೆ,
ನಿತ್ಯ ವಂದನೆ!

೩. ಆಶ್ಚರ್ಯ ಪ್ರೀತಿಯೆ!
ವಿಚಿತ್ರ ದಯವೆ!
ಪಾಪಕರ್ಮದಿಂದ
ಕೆಟ್ಟೋದ ನಮಗೆ
ಉಂಟಾಯ್ತು ಶಿಶುವಿಂದ
ಅನಂತ ಹರ್ಷವೆ.
ಶೀಘ್ರವಾಗಿಯೆ
ಶೇರೋಣದಕೆ!

೪. ಇನ್ನಲ್ಲಿ ಹರ್ಷವು
ಸಂಪೂರ್ಣವಹುದು;

ಪರಲೋಕಸಭೆ,
ಹೊಸ್ತಾದ ರಾಗವು,
ಯೆರೂಸಲೇಮ ಪ್ರಭೆ,
ಇವೆಮ್ಮ ಗತಿಯು!
ಶೀಘ್ರವಾಗಿಯೆ
ಶೇರೋಣಲ್ಲಿಗೆ!

## c. ಪ್ರತ್ಯಕ್ಷತೆಯ ಹಬ್ಬ.

### ೪೧.

Mel. Der Pilger aus der Ferne.
14. 23. 149.

೧. ಏಳೋ, ಚೀಯೋನ ಸಭೆ!
ಪ್ರಕಾಶವಾಗೆಲೇ,
ಯೆಹೋವನಿಂದ ಪ್ರಭೆ
ನಿನ್ನಲ್ಲಿ ಮೂಡಿದ್ದೇ!

೨. ಸಮಸ್ತ ಜನರಲ್ಲಿ
ಅಗಾಧ ಕತ್ತಲು,
ಸಮಸ್ತ ಪೃಥ್ವಿಯಲ್ಲಿ
ಮಹಾಂಧಕಾರವು.

೩. ನಿನ್ನೋಜ ಶೇರಿಯಾರು
ನಾನಾ ಜನಂಗಳು;
ನಿನ್ನನ್ನು ವಂದಿಸ್ಯಾರು
ಪ್ರಖ್ಯಾತ ರಾಜರು.

೪. ಕಣ್ಣೆತ್ತಿ, ಗುಂಪು ನೋಡಿ,
ಚನ್ನಾಗಿ ಹರ್ಷಿಸು!
ಮಹಾ ಸಮೂಹ ಓಡಿ
ಬಂದದ್ದ ಬೀಳ್ವದು.

೫. ಬಂದಾರು ದೂರದಿಂದ,
ಅಗೋ, ಕುಮಾರರು;
ಮಿಗ್ಯಾರು ಚನ್ನಿನಿಂದ
ಕುಮಾರಿತೆಗಳು.

೬. ಹೆಚ್ಚಾದ ಬೆರ್ಗಿನಿಂದ
ನಿನ್ನಕ್ಷಿ ಅರ್ಳುದು;
ಸಂತೋಷ ಪ್ರಭೆಯಿಂದ
ತುಂಬೋದು ಹೃದವು.

೭. ಸಮುದ್ರದ್ವೀಪವೆಲ್ಲ
ಚೀಯೋನಿನಾಸ್ತಿಯೇ!
ಭೂದೇಶವಾಸಿಯೆಲ್ಲ
ನಿನ್ನೊಳಗಾದದೇ!

೮. ಒಂಟೇ ಸಮೂಹದಿಂದ
ಸಂದಣಿಯಹುದು;
ಆ ಸೇಬಶೀಮೆಯಿಂದ
ಹೇಮಾದಿ ತರ್ವರು.

೯. ಅಗೋ, ಮಿದ್ಯಾನಿನಿಂದ
ಬಂದಾರು ದೂತರು.
ಹುಟ್ಟೀತು ಎಲ್ಲರಿಂದ
ಅನಂತ ಸ್ತೋತ್ರವು.

## d. ಕ್ರಿಸ್ತನ ಶ್ರಮವು.

### ೪೨.

Mel. Nun ruhen alle Wälder.
48. 54. 97.

೧. ಆ ಕಳ್ಳ ಕ್ರೂಜೆಯಲ್ಲಿ
ತನ್ನಂತ್ಯ ಕ್ಷಣದಲ್ಲಿ
ವಿಶ್ವಾಸಿಸುತ್ತಲೇ
ಕ್ರಿಸ್ತೊಡೆಯಂಗೆ ಬಾಗಿ,
ಕಟಾಕ್ಷ ಬೇಡಲಾಗಿ,
ಕೃತಾರ್ಥನಾದನಲ್ಲವೇ?

೨. ಅಸಹ್ಯ ಪಾಪಗಾರ
ಸಂಪೂರ್ಣ ಪರಿಹಾರ
ತಕ್ಕೊಳ್ಳ ಬಹುದೇ?
ಹೌಧೌದು, ಕ್ರಿಸ್ತಶ್ರಮೆ
ವಿಶ್ವಾಸಿಗಳ್ಗೆ ಕ್ಷಮೆ!
ಈ ಮಾತು ಎಂದು ನಿಜವೇ!

೩. ಆದಾಗ್ಯು ಒಂದೆ ಭಯ—
ಪ್ರತ್ಯಕ್ಷವಾದ ದಯ
ಆ ಒಬ್ಬ ಹೊಂದಲು,
ಮತ್ತೊಬ್ಬ ಕಳ್ಳ ತೀರಿ,
ಸಂರಕ್ಷಾಕಾಲ ಮಿಾರಿ,
ನ್ಯಾಯಾಜ್ಞೆ ಪಟ್ಟು ಕೆಟ್ಟನು.

೪ ಜಗತ್ತು ಪೂರ್ಣ ಮಾಯ!
ಓ ಯೇಸು, ನೀ ಸಹಾಯ
ಭಯಾತ್ಮಗಿಕ್ಕೊದು!
ಇನ್ನ್ಯಾಕೆ ವ್ಯರ್ಥ ಭಯ?
ಇಲ್ಲ್ಯಲ್ಲಿ ನಿನ್ನ ದಯ
ಸಾಕ್ಷ್ಯೈಯ್ಯ ನನಗೆಂದಿಗು!

### ೪೩.

Mel. Nun danket alle Gott. 25. 135.

೧. ಇಗೋ, ಮನುಷ್ಯನು!
ಕಣ್ಣಲ್ಲಿ ದುಃಖಜಲ;
ಮೋರೇಲಿ ಲಜ್ಜೆಯು;
ತುಟೇಲಿ ಶೋಕಮಲ;
ಹಣೇಲಿ ಬೆವರು;
ಸಂಕಷ್ಟ ಮನದಿ;
ಎದೇಲಿ ತಾಳ್ಮೆಯು;—
ಈ ರೂಪ ನೋಡಿರಿ!

೨ ಇಗೋ, ಮನುಷ್ಯನು!
ತುಂಬಾಯ್ತು ಘಾಯದಿಂದ
ಶರೀರವೆಲ್ಲವು;
ಈ ಶ್ರಮವೇತರಿಂದ?
ಪವಿತ್ರನೇತಕೆ
ಪ್ರಯಾಸ ಪಟ್ಟನು?
ನಮ್ಮಪರಾಧವೆ
ಆತನ್ನ ಕೊಂದಿತು!

೩. ಇಗೋ, ಮನುಷ್ಯನು!
ನೀ ಪಟ್ಟ ಶ್ರಮೆಯನ್ನು
ನಾವೆಂದು ಮರ್ಯೆವು.
ಓ ಸ್ಥಿರ ಧ್ಯಾನವನ್ನು
ಕೊಡೆಮಗೇಸುವೆ!
ನಮ್ಮನ್ನು ದೃಷ್ಟಿಸು!
ನೀನೊಬ್ಬ ನಮಗೆ
ಮಧ್ಯಸ್ಥಗಾರನು.

೪. ಇಗೋ, ಮನುಷ್ಯನು!
ನಿನ್ನಲ್ಲಿ ನಂಬುತೇವೆ.
ಅನಂತ ಜೀವವು,
ಓ ಕರ್ತ, ನಿನ್ನ ಸೇವೆ!
ನೀ ಶಾಪ ತಾಳಿದೆ;
ಅಭಯವಾಯಿತು,
ಸಮಾಧಿ ನಮಗೆ
ವಿಶ್ರಾಂತಿಸ್ಥಳವು.

---

೪೪.

Mel. Ein Lämmlein geht und trägt die Schuld. 123.

೧. ಈ ಲೋಕದಪರಾಧವ
ಕೊಂಡೊಯ್ವ ಕುರಿಮರಿ
ತಾಳುತ್ತೆ ಪಾಪಜಾತಿಯ
ಪಾಪಂಗಳಿಂಗೆ ಸರಿ.
ಅದ್ಹೋಗಿ, ಸುಖವಗಲಿ,
ಸಾವಿಂಗೆ ಜೀವವೊಪ್ಪಿಸಿ,
ಬಲ್ಯಾಗಿ ಕೊಯ್ಯಲ್ಪಟ್ಟು,
ತಕ್ಕೊಳ್ಳುತದೆ ಸಂಕಟ,
ಪೆಟ್ಟು, ಹಾಸ್ಯ, ಘಾಯ, ಮ
ರಣ,
ಸಮಸ್ತಕೊಡಂಬಟ್ಟು.

೨. ಆ ಕುರಿಮರಿ ನಮಗೆ
ಅತೀಷ್ಟ ಯೇಸು! ಕೇಳಿ!
ಈತನ್ನ ಪಾಪನಾಶಕೆ
ದೇವ್ರಾದನಿಂತು ಹೇಳಿ—
"ನೀ ಹೋಗಿ, ತಾಳು ಸಾವ
ನು!
ಪಾಪಿಷ್ಠರಂ ವಿಮೋಚಿಸು!
ಇದಕ್ಕೆ ನೀನೆ ಶಕ್ತ.
ಕೋಪಾಗ್ನಿ, ಪಾಪದಂಡನೆ
ದೊಡ್ಡದ್ದು; ಪ್ರಾಯಶ್ಚಿತ್ತಕೆ
ಉಪಾಯ ನಿನ್ನ ರಕ್ತ."

೩. ಕ್ರಿಸ್ತೇಸುವೆಂದ—"ತಂ
ದೆಯೆ,
ನಾ ತಾಳ್ವೆನೆಲ್ಲವನ್ನ;
ನಿನ್ನತಿಪ್ರಿಯ ಅಪ್ಪಣೆ
ನನ್ನೊಂದೆ ಇಷ್ಟ ಅನ್ನ!"
ಆಶ್ಚರ್ಯವಾದ ಪ್ರೀತಿಯೇ!
ನಿಂಗಾಗಿ ಏಕ ಪುತ್ರನೇ
ದೇವರ್ಗೆ ದೂರವಾದ.
ಓ ಬಲವುಳ್ಳ ಪ್ರೀತಿಯೇ!
ಪ್ರಶಸ್ತ ಜೀವರಾಜನೇ
ನಿನ್ನಿಂದ ಮೃತನಾದ.

೪. ಓ ಪ್ರೀತಿ, ನಾನು ನಿತ್ಯಕು
ನಿನ್ನನ್ನು ನೆನದೇನು;
ನೀ, ಪ್ರೀತಿ, ನನ್ನನಪ್ಪಲು,
ನಾ ನಿನ್ನನಪ್ಪಿಯೇನು!
ನೀನೆನ್ನ ಜೀವಕಾಂತಿಯೆ,
ನಿನ್ನಾಳು ನಾನು; ನಿನಗೆ
ನನ್ನನ್ನು ಒಪ್ಪಿಸ್ಯೇನು;
ಆ ಲೋಕವಂ ಪ್ರವೇಶಿಸಿ,
ನೀ ಕೊಟ್ಟ ಮಡಿವಸ್ತ್ರದಿ
ನಿನ್ನೈಕ್ಯ ಪಡದೇನು.

೪೫೯.

Mel. Die wir uns allhier beisammen finden. 124.

೧. ಒಂದೆ ಮುಖ್ಯವಾದ ಆ
ತ್ಮಪೋಷ
ಮಾತ್ರ ನನಗಾದರೆ,
ಇಹಲೋಕಾರಣ್ಯವಂ, ಸಂ
ತೋಷ
ಪಟ್ಟು, ದಾಟಿ ಹೋಗುವೆ.
ದುಃಖಾಕ್ರಾಂತನಾಗಿ ತೋಟ
ದಲ್ಲಿ
ಧೀರ ಶ್ರಮ ತಾಳ್ದ ಯೇಸುವಲ್ಲಿ
ಆತ್ಮದೃಷ್ಟಿ ಇಟ್ಟರೆ,
ನಾನು ಮುಕ್ತನಾಗುವೆ.

೨. ನೀನು ತೋರಿಸಿದ ತಾ
ಳ್ಮೆಯನ್ನು,
ನನ್ನ ಪ್ರಿಯ ಯೇಸುವೆ,
ನಿನ್ನ ರಕ್ತಮಯ ರೂಪವನ್ನು
ನಾನು ಎಂದು ಮರೆಯೆ!
ನೀನು ಕ್ರಯಕೆನ್ನ ಆತ್ಮ ಕೊಂ
ಡು,
ಕ್ರೂಜೆಯಲ್ಲಿ ತೀವ್ರ ದಾಹ
ಗೊಂಡು,
ಜೀವವಂ ವಿಸರ್ಜಿಸಿ,
ತೀರಿತೆಂತ, ಕೂಗಿದಿ.

**೩.** ನನಗಾಗಿ ನೀನು ಪಟ್ಟ ಕ
ಷ್ಟ
ಎಂದು ನೆಪ್ಪು ಮಾಡುವೆ;
ಘೋರ ಕತ್ತಲಲ್ಲಿ ಅಪಭ್ರಷ್ಟ
ನಾನು ಕೂತು ಕೊಳ್ಳಲೆ,
ಅನುಗ್ರಹ ಗೊಂಡು, ಪ್ರೀತಿ
ಯಾಗಿ
ನಿನ್ನ ರಕ್ತ ಚಲ್ಲಿ ನನಗಾಗಿ,
ಕೊಟ್ಟಮೂಲ್ಯ ಬೆಲೆಯ,
ಕೊಂಡು ಕೊಂಡಿ ದಾಸನ.

**೪.** ಇನ್ನು ನಾನು ನಿನ್ನ ದಾ
ಸ, ಯೇಸು!
ಆಗಲೆನ್ನು, ಪತಿಯೇ!
ನಿನ್ನ ನಾಮವೊಂದೆ ನಂಗೆ ಲೇ
ಸು,
ಅತಿಶ್ರೇಷ್ಠ ಮಿತ್ರನೇ!
ನಿನಗಾಗಿ ಕಾರ್ಯ ನಡಿಸ್ಯೇ
ನು,
ನಿನಗಾಗಿ ಬಾಳಿ ಮಡಿದೇನು!
ಜೀವವಿರ್ವ ವರೆಗೆ
ಈ ಪ್ರಮಾಣ ಸ್ಥಿರವೆ!

## ೪೭.

Mel. Herzliebster Jesu. 137.

**೧.** ಓ ಪ್ರಿಯ ಯೇಸು, ನಿನ್ನ
ಕರ್ಮವೇನು?
ನೀನಿಂಥ ಆಜ್ಞೆಗೊಳಗಾದದೇ
ನು?
ನಿನ್ನಲ್ಲಿ ಅಪರಾಧ ಕಂಡರೇನು?
ನಾ ಹೇಳಲೇನು?

**೨.** ನಿನ್ ಕೆನ್ನೆ ತಟ್ಟಿ, ಮುಖ
ಕುಗುಳಿಟ್ಟು,
ಮುಳ್ಮುಡಿ ರಕ್ತಮಯ ಮಂಡೆ
ಗಿಟ್ಟು,
ನಿಂಗಿತ್ತರಯ್ಯೋ ಅಮ್ಲಪಿತ
ಪಾನ,
ಓ ಯಜಮಾನ!

**೩.** ನಿನ್ನಲ್ಲಿ ಬೀಳ್ಪುದೈಯ್ಯ
ನನ್ನ ಪಾಪ;
ನಿನ್ನನ್ನು ಕಾಡ್ಪುದೈಯ್ಯ ನನ್ನ
ಶಾಪ.
ಅನಂತ ಕರ್ಮ! ನೋಡಿ ತಾಳ
ಲಾರೆ
ನಿನ್ನಶ್ರುಧಾರೆ!

**೪.** ಪುಣ್ಯಾತ್ಮ ನೀನು ನಿತ್ಯ
ಬಾಳಲಾಪಿ;

ನಾನೈಯ್ಯ ಸತ್ತು ಕೆಡ ತಕ್ಕ
ಪಾಪಿ.
ಹೆಡ್ಡಾಳಿಗಾಗಿ ಸಾಯುತಾನೆ
ರಾಯ!
ಇದೆಂಥ ನ್ಯಾಯ.

೫. ಓ ಪ್ರೀತಿ, ನನಗೊಲ್ದ ಅ
ನಾಥನಾದಿ!
ಓ ನೀತಿ, ನನಗೊಲ್ದು ಪಾಪ
ವಾದಿ!
ನನ್ನಲ್ಲಿ ಹೆಚ್ಚಲಿಹಲೋಕಕ್ರೀ
ಡೆ,
ನಿಂಗಾಯ್ತು ಪೀಡೆ.

೬. ನಾನೇನು ಹೇಳಲೇನು
ಮಾಡಲೈಯ್ಯ?
ನೀ ಗೆದ್ದೆ ಗೆದ್ದಿ, ನಾನು ಸೋ
ತೆನೈಯ್ಯ!
ನನ್ನಾಳ್ಮ, ಕ್ಷಮಿಸ್ಯೋಡಿಸೆನ್ನ
ಭಯ!
ಈಯ್ ನಿನ್ನ ದಯ!

೭. ಅಪಾಯನಿಂದೆ, ಮೃ
ತ್ಯುಭಯ ಬಿಟ್ಟು,
ನಿನ್ನೊಳ್ಮೆಯಲ್ಲಿ ಮಾತ್ರ ಲಕ್ಷ್ಯ
ವಿಟ್ಟು,
ನಾನಿರ್ವೆ, ಯೇಸು, ಇಹಪರ
ದಲ್ಲಿ
ನೀನಿರುವಲ್ಲಿ.



## ೪೨.

Mel. Nun ruhen alle Wälder.
48. 54. 97.

೧. ಓ ಲೋಕ, ನೋಡು!
ಅಲ್ಲಿ
ಆ ಕ್ರೂಜೆವೃಕ್ಷದಲ್ಲಿ
ಅಘೋರ ನೋಟವೇ!
ಆ ಕಷ್ಟದಾಳು ಯಾರು?
ಆ ನಿಂದೆದಾಸನಾರು?
ಪ್ರಶಸ್ತ ಜೀವರಾಜನೇ!

೨. ಈ ದೊಡ್ಡ ಪೀಡೆಯ
ನ್ನು,
ಈ ರಕ್ತಬೆವರನ್ನು
ಚನ್ನಾಗಿ ದೃಷ್ಟಿಸು!
ಅಗಾಧ ಶೋಕದಿಂದ,
ನಿಟ್ಟುಸುರಾರ್ತಿಯಿಂದ
ಈ ಎದೆ ಭಿನ್ನವಾಯಿತು.

೩. ಯಾರಿಂದ ಪೆಟ್ಟು ತಿಂದೆ?
ಈ ಕ್ರೂರವಾದ ನಿಂದೆ
ನೀನೇಕೆ ತಾಳಿದೆ?

ನೀನಪರಾಧಿಯಲ್ಲ,
ನಮ್ಮಂತೆ ದುಷ್ಟನಲ್ಲ;
ಪವಿತ್ರ ದೇವಪುತ್ರನೆ.

೪. ನಾ ಮಳಲಷ್ಟು ಪಾಪ
ಗೈದ್, ಅತಿಭಾರಶಾಪ
ಹೊಂದಿರುವಾಗಲೆ,
ಅಶುದ್ಧ ಪಾಪಿಗಾಗಿ
ನೀ ಶುದ್ಧ ಹೊಣೆಯಾಗಿ,
ನನ್ನೆಲ್ಲ ಶಾಪ ತಾಳಿದೆ.

೫. ನಿನ್ನನುಗ್ರಹಕಾಗಿ
ಏನೇನು ಪ್ರತಿಯಾಗಿ
ನಾ ಮಾಡ ಬಹುದು?
ನಾ ಬಿದ್ದ ಪಾಪವನ್ನು,
ನೀ ಪಟ್ಟ ಶ್ರಮೆಯನ್ನು
ನಾನೆಂದು ಮರ್ತು ಬಿಡೆನು.



## ೪೮.

Mel. O Lamm Gottes,
unschuldig. 49.

೧. ಕುರಿಯಂತೆಯೆ ನಿನ್ನ
ಬಲ್ಯಾಗಿ ಕೊಟ್ಟ ಪವಿತ್ರ!
ನಿಂದೆ, ಶ್ರಮವ ತಿನ್ನ
ಬಂದೊಳ್ಳೆ ಮಾನವಮಿತ್ರ!
ನೀ ಹೊತ್ತಿ ನಮ್ಮ ದೋಷ;
ನೀ ನಮ್ಮ ಆತ್ಮಪೋಷ.
ನಮ್ಮನ್ನು ರಕ್ಷಿಸು, ಓ ಯೇಸು!



## ೪೯.

Mel. Sieh, hier bin ich,
Ehrenkönig. 6. 10.

೧. ಜೀವಕಾಂತಿಯನ್ನು ಬಿಟ್ಟ
ರಕ್ತಮಯ ಮುಖವೇ,
ಮುಳ್ಳುಮಾಲೆ ಬಿಗಿದಿಟ್ಟ
ಘಾಯವಾದ ತಲೆಯೇ,
ದ್ವೇಷವೆಷ್ಟೊ,
ನಿಂದೆಯೆಷ್ಟೊ
ನಿನ್ನ ಮೇಲೆ ಬಂದದೇ!

೨. ನೀನು ಸತ್ತ ಹೇತುವೇನು?
ನನ್ನ ದುಷ್ಟ ಪಾಪವೆ!
ಸತ್ತ ಹೇತು ನಿನಗೇನು?
ನನ್ನ ಶಾಪರಾಶಿಯೆ!
ಕ್ರೂಜೆಯಲ್ಲಿ
ರಕ್ತ ಚಲ್ಲಿ,
ಜೀವ ಕೊಟ್ಟೆ ನನಗೆ.

೩. ಯಾಕೆ ನಿನ್ನಮೇಲೆ ಕಷ್ಟ,
ದುಃಖ, ಶ್ರಮ ಬಿದ್ದವು?

ನಿತ್ಯನನ್ನು ಜೀವನಷ್ಟ
ಯಾಕೆ ಹಿಡುಕೊಂಡಿತು?
ನಿನ್ನ ಕಷ್ಟ,
ನಿನ್ನ ನಷ್ಟ
ನಂಗೆ ಮೋಕ್ಷಪ್ರಾಪ್ತಿಯು!

೪. ನಿನ್ನ ಶುದ್ಧ ರಕ್ತದಿಂದ
ನನ್ನ ಪಾಪ ತೊಳದು,
ನಿನ್ನ ಆತ್ಮಶಕ್ತಿಯಿಂದ
ಅಂಧಕಾರ ಬಿಡಿಸು!
ನಿನ್ನ ನೀತಿ,
ನಿನ್ನ ಪ್ರೀತಿ
ನನ್ನ ನಿತ್ಯ ಸುಖವು!



## ೫೦.

Mel. O Lamm Gottes, unschuldig. 49.

೧. ದೋಷರಹಿತವಾಗಿ
ನಿಬದ್ಧ ದೇವರ ಕುರಿ!
ತಾಳ್ಮೆಪೂರಿತವಾಗಿ
ನಿಂತಿಪ್ಪ ಹಾಸ್ಯದ ಗುರಿ!
ಅಘೋರ ನಿನ್ನ ತಾಪ;
ಅಸಂಖ್ಯ ನಮ್ಮ ಪಾಪ.
ಕಾರುಣ್ಯ ತೋರಿಸು, ಓ ಯೇಸು!

೨. ದೋಷರಹಿತವಾಗಿ
ನಿಬದ್ಧ ದೇವರ ಕುರಿ!
ತಾಳ್ಮೆಪೂರಿತವಾಗಿ
ನಿಂತಿಪ್ಪ ಹಾಸ್ಯದ ಗುರಿ!
ಅಘೋರ ನಿನ್ನ ತಾಪ;
ಅಸಂಖ್ಯ ನಮ್ಮ ಪಾಪ.
ಕಾರುಣ್ಯ ತೋರಿಸು, ಓ ಯೇಸು!

೩. ದೋಷರಹಿತವಾಗಿ
ನಿಬದ್ಧ ದೇವರ ಕುರಿ!
ತಾಳ್ಮೆಪೂರಿತವಾಗಿ
ನಿಂತಿಪ್ಪ ಹಾಸ್ಯದ ಗುರಿ!
ಅಘೋರ ನಿನ್ನ ತಾಪ;
ಅಸಂಖ್ಯ ನಮ್ಮ ಪಾಪ.
ವಿಶ್ರಾಂತಿ ಪಾಲಿಸು, ಓ ಯೇಸು!



## ೫೧.

Mel. Der am Kreuz ist meine Liebe. 63. 75. 150.

೧. ನನ್ನ ಪ್ರೀತಿ ಕ್ರೂಜೆಯಲ್ಲಿ!
ಬೇರೆ ಆಶೆ ಇರದು.
ಅತಿಪ್ರಿಯ ಯೇಸುವಲ್ಲಿ
ಹೃತ್ತು ದೃಢವಾಯಿತು.
ಎಂದಿಗೊಂದೆ ವಾಕ್ಯವು

ಹೃತ್ಸಂಗೀತವಹುದು —
"ಸುಖದುಃಖಕಾಲದಲ್ಲಿ
ಪ್ರೀತಿ ಕ್ರೂಜೆಯಾತನಲ್ಲಿ!"

೨. ಪ್ರೀತಿಯಿಂದ ನಿಂದೆ, ನ
ಷ್ಟ,
ಹಿಂಸೆ, ಬಡತನವು,
ಚಿಂತೆ ಮೊದಲಾದ ಕಷ್ಟ
ಹುಟ್ಟೊದೆಂತ, ಬಲ್ಲೆನು.
ಯೇಸು ಆಜ್ಞೆ ಕೊಡಲು,
ತೀಕ್ಷ್ಣ ಮೃತಿಗಂಜೆನು.
ಸುಖದುಃಖಕಾಲದಲ್ಲಿ
ಪ್ರೀತಿ ಕ್ರೂಜೆಯಾತನಲ್ಲಿ!

೩. ಆತನೊ‌ಡ್ಡಿರ್ತು ಇಹಸುಖ
ನಂಗೆ ಸುಖವಲ್ಲವು;
ಆತನಿರೆ, ಪ್ರೀತಿದುಃಖ
ದುಃಖವೆಂತ, ಹೇಳೆನು.
ಈ ಪ್ರಪಂಚದವರು
ಬೈದರೇನು ಚಿಂತೆಯು?
ಸುಖದುಃಖಕಾಲದಲ್ಲಿ
ಪ್ರೀತಿ ಕ್ರೂಜೆಯಾತನಲ್ಲಿ!

೪. ದುಷ್ಟವೈರಿಕೋಪವನ್ನು
ಜೈಸಲೆಂಗೆ ಧೈರ್ಯವು;
ಮಾಂಸಾಸಹ್ಯ ಕ್ರಿಯೆಯನ್ನು
ಹೇಸಿ, ತಳ್ಳಿ ಬಿಟ್ಟೆನು.
ಯೇಸುನಾಥಪ್ರೀತಿಯು
ಪರಮೇಷ್ಟವಹುದು.
ಇರೆನೊಂದು ಚಿಂತೆಯಲ್ಲಿ;
ಪ್ರೀತಿ ಕ್ರೂಜೆಯಾತನಲ್ಲಿ!

೫. ಆತ ಪಿತೃಗೃಹದಲ್ಲಿ
ಪ್ರಿಯರನ್ನು ಶೇರಿಸಿ,
ಮುಡಿ ಇಟ್ಟು, ಮಾಲ್ಯ ಚಲ್ಲಿ!
ಫಲವೀಯ್ವನಂತ್ಯದಿ.
ಲೋಕ ಆತನರಿತು
ಮೆಚ್ಚಲೆಂಥ ಸುಖವು!
ಹಾಡಿರಿಹಪರದಲ್ಲಿ—
"ಪ್ರೀತಿ ಕ್ರೂಜೆಯಾತನಲ್ಲಿ!"

---

೫೨.

Mel. Ach sieh ihn dulden, bluten, sterben. 82.

೧. ನಮ್ಮಾಳ್ಮ ಪಟ್ಟ ಶ್ರಮೆ
ಯನ್ನು
ವಿನಯವಾಗಿ ನೋಡಿ ಧ್ಯಾನಿ
ಸು!
ಸರ್ವೇಶ ತನ್ನ ಜೀವವನ್ನು
ಮನುಷ್ಯಜಾತಿಗಾಗಿ ಕೊಟ್ಟ
ನು.

ಈ ದೊಡ್ಡ ಪ್ರೀತಿಗೀಡು ಆದದು
ಮತ್ತ್ಯಾವನಲ್ಲು ಕಾಣದೆಂದಿಗು.

೨. ಓ ಕ್ರಿಸ್ತ, ನಿನ್ನ ಕ್ರೂಜೆಯಲ್ಲಿ
ಅನಂತ್ಯ ಪ್ರೀತಿಯನ್ನು ತೋರಿಸಿ,
ಪವಿತ್ರ ನಿನ್ನ ರಕ್ತ ಚಲ್ಲಿ,
ವಿಮುಕ್ತಿಕಾರ್ಯಮುದ್ರೆ ಹಾಕಿದಿ.
ಭೂಪರಲೋಕ ನಾಶವಾದರು,
ಈ ಪ್ರೀತಿ ಎಂದು ಬಿದ್ದು ಹೋಗದು.

೩. ನೀ ಕ್ರೂಜೆಯಲ್ಲಿ ತೂಗಲಾಗಿ,
ಮಧ್ಯಾನ್ಹದಲ್ಲಿ ಗಾಢ ಕತ್ತಲು,
ಅಘೋರವಾದ ಗುರುತಾಗಿ,
ಭಯಸ್ಥ ಭೂಮಿಯನ್ನು ಮುಚ್ಚಿತು.
ನಿನ್ನಲ್ಲಿ ನಂಬಿ ನಾನು ಸತ್ತರೆ,
ಅನಂತ ಕಾಂತಿಯನ್ನು ಕಾಣುವೆ.

೪. ಉಂಟೆನಗೀಗ ಪರಿಹಾರ!
ಸೈತಾನನೆಂಬ ಹಳೆ ಶತ್ರುವು
ಸರ್ವೇಶನಾಜ್ಞೆಯ ಪ್ರಕಾರ
ನನ್ನಲ್ಲಿ ಪಾಲು ಹೊಂದಲಾರನು.
ನಾನೇಸುಕ್ರಿಸ್ತಶಿಷ್ಯನಾದರೆ,
ಮಹಾ ಸಂತೋಷದಿಂದ ತೀರುವೆ.



## ೫೩.

Mel. Sicilian mariner's hymn. 2.

೧. ಯೇಸು ಕ್ರಿಸ್ತನೇ,
ಮೃತಿಮೃತಿಯೇ,
ನಮ್ಮ ಜೀವಜೀವವೇ!
ನಿನ್ನ ಶ್ರಮೆ
ನಮ್ಮ ಕ್ಷಮೆ.
ಕಾಯಿ, ಕಾಯಿ, ನಮ್ಮನ್ನು!

೨. ಕಳ್ಳನಂತೆಯೆ
ನಮ್ಮ ದಂಡನೆ
ಹೊಣೆಯಾಗಿ ತಾಳಿದೆ.
ನೀ, ಪವಿತ್ರ
ದೈವಮಿತ್ರ,
ಕಾಯಿ, ಕಾಯಿ, ನಮ್ಮನ್ನು!

೩. ದುಷ್ಟ ಹಾಸ್ಯವು,
ಮುಳ್ಳುಮಾಲೆಯು
ನಿನ್ನ ಘನವಾಯಿತು.
ನಮ್ಮ ನಿಂದೆ
ನೀನು ತಿಂದೆ.
ಕಾಯಿ, ಕಾಯಿ, ನಮ್ಮನ್ನು!

೪. ಬಡ ಪಾಪಿಗೆ
ನಿನ್ನ ಕ್ರೂಜೆಯೆ
ಜೀವವೃಕ್ಷವಾದದೆ!
ನಿನ್ನ ದುಃಖ
ನಮ್ಮ ಸುಖ.
ಕಾಯಿ, ಕಾಯಿ, ನಮ್ಮನ್ನು!

೫. ದಿವ್ಯ ಪ್ರೀತಿಯೇ,
ದೇವಪುತ್ರನೇ,
ಕನ್ಯಾಸ್ತ್ರೀಯ ಮಗುವೇ!
ಜೀವದಲ್ಲು
ಮೃತಿಯಲ್ಲು
ಕಾಯಿ, ಕಾಯಿ, ನಮ್ಮನ್ನು!

---

## ೫೪.

Mel. Ringe recht, wenn Gottes Gnade. 13. 17. 22. 118.

೧. ಯೇಸು ಕ್ರೂಜೆವೃಕ್ಷದಲ್ಲಿ
ತೂಗುತಿರುವಾಗಲು,
ಆತ್ಮ ಮನ ಮೈಗಳಲ್ಲಿ
ದುಃಖ ತಾಳುತಿದ್ದನು.

೨. ಕಳ್ಳರಲ್ಲಿ ಕಳ್ಳನೋಲು
ಕ್ರೂಜೆಯಲ್ಲಿ ಸತ್ತನು;
ಆತನೆದೆಗೀಟಿಕೋಲು
ಹದವಾಗಿ ತಾಗಿತು.

೩. ಸ್ವಲ್ಪ ಜನ ಪ್ರೀತಿಯಿಂದ
ಹತ್ರ ನಿಂತು ಕೊಂಡಿತು;
ನಿಂತು, ಘೋರ ದುಃಖದಿಂದ
ಬಿಕ್ಕಿ ಅಳುತಿದ್ದುದು.

೪. ಮುಂಚೆ ಜ್ಞಾನವೃಕ್ಷದಿಂದ
ಮೃತ್ಯುಫಲ ಹುಟ್ಟಿತು;
ಈಗ ಕ್ರೂಜೆತರುವಿಂದ
ಜೀವಫಲವಹುದು.

೫. ಹಗೆ ತಾಳ್ದ ಕ್ರಿಸ್ತನಲ್ಲಿ
ನಿತ್ಯ ಸ್ನೇಹಮೂಲವು;
ಆತ ಪಟ್ಟ ಶ್ರಮದಲ್ಲಿ
ನಿತ್ಯ ಸುಖವಾಯಿತು.

೬. ಶುಭ ವರ್ತಮಾನವನ್ನು
ಕೇಳಿ, ಕ್ರೂಜೆ ದೃಷ್ಟಿಸಿ,
ಆ ಮನುಷ್ಯಪುತ್ರನನ್ನು
ನಂಬಿ, ಸ್ತೋತ್ರ ಮಾಡಿರಿ!

---

## e. ಕ್ರಿಸ್ತನ ಉತ್ಥಾನ. ಪಸ್ಕದ ಹಬ್ಬ.

### ೫೫.

Mel. Wie schön leucht't uns der Morgenstern. 11.

೧. ಈ ದಿನದಲ್ಲಿ ಯೇಸುವು
ಸಮಾಧಿಯಿಂದ ಎದ್ದನು,
ಸಜೀವಿ ಅರಸಾಗಿ.
ವಿಜಯರಾಗ ಹಾಡಿರಿ!
ಅನಂತ ಸ್ತೋತ್ರ ಮಾಡಿರಿ,
ವಿಧೇಯ ದಾಸರಾಗಿ!
ತನ
ಘನ
ಅಗ್ಲಿ ಬಿಟ್ಟು,
ಪ್ರೀತಿ ಇಟ್ಟು
ನರರಲ್ಲಿ,
ಕ್ರಿಸ್ತ ಸತ್ತ ಕ್ರೂಜೆಯಲ್ಲಿ.

೨. ಓ ನಮ್ಮ ಪ್ರಿಯ ಕರ್ತನೆ,
ನೀನೆಮ್ಮ ನಿತ್ಯ ಕೋರಿಕೆ!
ನಿನ್ನಲ್ಲಿ ನಂಬಿದ್ದೇವೆ.
ನಿನ್ಹೊರ್ತು ಬೆಳಕಿಲ್ಲವು;
ನಿನ್ಹೊರ್ತು ಸುಖ ಕಾಣದು;
ನಿನ್ಹೊರ್ತು ಸಾಯುತೇವೆ.
ಆಳು,
ಬಾಳು!
ಜೈಸಿ ನಿನ
ಶತ್ರುವಿನ
ರಾಜ್ಯವನ್ನು,
ಕಾಯಿ ನಿನ್ನ ಪ್ರಜೆಯನ್ನು!

೩. ಈ ಮರ್ತ್ಯ ದೇಹದಿಂ
ದಲೂ
ಸಮಾಧಿಯೊಳಗಿಂದಲೂ
ವಿಧೇಯ ಭಕ್ತರನ್ನು
ಓ ತಪ್ಪಿಸೇಸುಕ್ರಿಸ್ತನೆ!
ಅನಂತ ಘನದೊಳಗೆ
ಕೊಡೈ ಪ್ರವೇಶವನ್ನು!
ಏರಿ,
ಶೇರಿ
ನೀನಿರ್ಪಲ್ಲಿ,
ಕಾಂತಿಯಲ್ಲಿ
ನಿನ್ನ ಮುಖ
ದೃಷ್ಟಿಸೋದು ಎಂಥ ಸುಖ!

---

### ೫೬.

Mel. Salvation, oh the joyful sound. 5.

೧. ಈ ಶುದ್ಧವಾದ ದಿನದಿ
ಸತ್ಹೋದ ಯೇಸುವು

ಸಂಜೈಸಿ ಪುನರ್ಜೀವಿಸಿ,
ಸಮಾಧಿ ಬಿಟ್ಟನು.
ಘನ ಮಂಗಳಂಗಳೆಲ್ಲ
ನಮ್ಮ ಕರ್ತನುಚ್ಚ ರಾಜ್ಯ;
ಯೇಸು ಕ್ರಿಸ್ತ ನಮ್ಮ ಜೀವ.
ಹಲ್ಲೆಲೂಯಾ ಹಾಡಿರಿ!

೨. ಈ ಶುಭವರ್ತಮಾನವು
ಸಮಸ್ತ ಲೋಕದಿ
ಸಮಸ್ತ ಜನಕುಲಕು
ಪ್ರಸಿದ್ಧಿಯಾಗಲಿ!
ಘನ ಮಂಗಳಂಗಳೆಲ್ಲ
ನಮ್ಮ ಕರ್ತನುಚ್ಚ ರಾಜ್ಯ;
ಯೇಸು ಕ್ರಿಸ್ತ ನಮ್ಮ ಜೀವ.
ಹಲ್ಲೆಲೂಯಾ ಹಾಡಿರಿ!

೩. ಮೃತೀಲಿ ಶೇರಿದಾತನು
ಎಂದೆಂದು ಬದುಕಿ,
ಆಕಾಶಗತ ಪತಿಯು
ಜಗತ್ತನಾಳಲಿ!
ಘನ ಮಂಗಳಂಗಳೆಲ್ಲ
ನಮ್ಮ ಕರ್ತನುಚ್ಚ ರಾಜ್ಯ;
ಯೇಸು ಕ್ರಿಸ್ತ ನಮ್ಮ ಜೀವ.
ಹಲ್ಲೆಲೂಯಾ ಹಾಡಿರಿ!

೪. ನೀ, ಯೇಸು, ಬಂದು, ಶಿಕ್ಷೆಯ
ವಿರೋಧಿಗೀಯಲು,
ಬಾ, ಸಭೆಯಂತರರ್ಥವ
ನಿನ್ನಲ್ಲಿ ತೀರಿಸು!
ಘನ ಮಂಗಳಂಗಳೆಲ್ಲ
ನಮ್ಮ ಕರ್ತನುಚ್ಚ ರಾಜ್ಯ;
ಯೇಸು ಕ್ರಿಸ್ತ ನಮ್ಮ ಜೀವ.
ಹಲ್ಲೆಲೂಯಾ ಹಾಡಿರಿ!

## ೫೭.

Mel. Mein Glaub ist meines Lebens Ruh. 16.

೧. ಓ ನಿತ್ಯಜೀವರಾಜನೇ,
ನೀನೆದ್ದಿ ತೇಜದಿಂದಲೇ
ಸಮಾಧಿಯೊಳಗಿಂದ!
ನಿನ್ನನ್ನು ಶಿಷ್ಯಮಂದೆಯು
ಕಂಡನುಜೀವ ಗೊಂಡಿತು
ಮಹಾಂತ ಹರ್ಷದಿಂದ.
ಓ ಯೇಸು, ನಿನ್ನ ಜೀವವೆ
ಜೀವೋದಯಂ ಜಗತ್ತಿಗೆ!

೨. ಸಮಸ್ತ ಗುಡ್ಡದಲ್ಲಿಯೂ
ಸಮಸ್ತ ತಗ್ಗಿನಲ್ಲಿಯೂ
ಪುಷ್ಪಂಗಳೇಳುತವೆ;
ವಸಂತಕಾಲ ತಿಳಿದು,
ಭೂಗರ್ಭದಿಂದ ಎಚ್ಚತ್ತು

ಬಂದ್ಹರ್ಷದಿಂದಲವೆ.
ಓ ಯೇಸು, ನಿನ್ನ ಜೀವವೆ
ಜೀವೋದಯಂ ಜಗತ್ತಿಗೆ!

೨. ಅಮೂಲ್ಯವಾದ ಬೀಜವ
ಯೊಸೇಫನಿಟ್ಟು ಮುಚ್ಚಿದ
ಆ ಶಿಲೆಗೋರಿಯಲ್ಲಿ;
ಅಮೂಲ್ಯವಾದ ಪುಷ್ಪವು
ಆ ಬೀಜದಿಂದ ಹುಟ್ಟಿತು
ಏಕಾಂತ ತೋಟದಲ್ಲಿ.
ಓ ಯೇಸು, ನಿನ್ನ ಜೀವವೆ
ಜೀವೋದಯಂ ಜಗತ್ತಿಗೆ!

೪. ಕಡೇಲಿ ಸರ್ವ ಲೋಕಕು
ವಸಂತ ಕಾಲ ಬಪ್ಪುದು
ದಿವ್ಯಾತ್ಮ ತ್ರಾಣದಿಂದ;
ಅಸಂಖ್ಯ ಜನಗಣವು
ಆವಾಗಲೆಚ್ಚತ್ತೇಳ್ವದು
ಭೂಗರ್ಭಕೋಣೆಯಿಂದ.
ಓ ಯೇಸು, ನಿನ್ನ ಜೀವವೆ
ಜೀವೋದಯಂ ಜಗತ್ತಿಗೆ!

೫. ತುತೂರಿ ಊದುವಾಗಲು,
ಮಹತ್ವದಲ್ಲಿ ಯೇಸುವು
ಈ ಭೂಮಿಗಿಳಿಯೋನು;
ಧೂಳಿಂದ ನಮ್ಮನೇರಿಸಿ,
ತಾನಿರ್ಪ ಘನಸ್ಥಳದಿ
ನಮ್ಮನ್ನು ಸೇರಿಸೋನು.
ಓ ಯೇಸು, ನಿನ್ನ ಜೀವವೆ
ಜೀವೋದಯಂ ಜಗತ್ತಿಗೆ!



## ೫೮.

Mel. Christ lag in Todes Banden. 57.

೧. ಕ್ರಿಸ್ತೇಸು ಕ್ರೂಜೆಯಲ್ಲಿ
ಸತ್ತೆಮ್ಮ ಪಾಪಕಾಗಿ,
ತೃತೀಯ ದಿನದಲ್ಲಿ
ತಾನೆದ್ದ ಜೀವಿಯಾಗಿ.
ಇದರಲ್ಲಿ ಹರ್ಷಿಸಿ,
ಕರ್ತಂಗೆ ಸ್ತೋತ್ರ ಮಾಡಿರಿ!
ಕೊಂಡಾಡಿ! ಹಲ್ಲೆಲೂಯಾ,
ಹಲ್ಲೆಲೂಯಾ!

೨. ಸಾವನ್ನು ಜೈಸೊ ಬಲ
ಭೂಜನಕಿರಲಿಲ್ಲ;
ನಮ್ಮಲ್ಲಿ ಪಾಪಮಲ,
ಎಲ್ಲೆಲ್ಲು ನೀತಿಯಿಲ್ಲ.
ಅದರಿಂದ ಮೃತ್ಯುವು
ನಮ್ಮಲ್ಲಿ ಕೈಯ ಹಾಕಿತು.
ಸಹಾಯಗಾರನಾರು? ಹಲ್ಲೆ
ಲೂಯಾ!

೩. ಸ್ವತಂದೆಮನೆಯಿಂದ
ಹೊಂಟವತಾರವಾಗಿ
ಅನಂತ ಪ್ರೇಮದಿಂದ
ಸತ್ತೆಮ್ಮ ಹೊಣೆಯಾಗಿ,
ಮರಣಾಧಿಕಾರವ
ಕ್ರಿಸ್ತೇಸುನಾಥ ಜೈಸಿದ.
ಇನ್ನೇನು ಭಯವಿಲ್ಲ! ಹಲ್ಲೆ
ಲೂಯಾ!

೪. ಜೀವಕ್ಕೆ ಸಾವಿಗಲ್ಲಿ
ಅನ್ಯೋನ್ಯ ಯುದ್ಧವಾಯ್ತು;
ಆ ಜೀವ ಜೈಸುವಲ್ಲಿ
ಸಾವನ್ನು ನುಂಗಲಾಯ್ತು.
ಸಾವ ತಾಳ್ದ ಜೀವವು
ಸಾವನ್ನು ಜೈಸಿ ಬಿಟ್ಟಿತು.
ನೀ ಸೋತಿ, ದುಷ್ಟ ಮೃತ್ಯು!
ಹಲ್ಲೆಲೂಯಾ!

೫. ಓ ಸತ್ಯ ಪಸ್ಕಬಲಿ,
ನೀನೆಮಗನ್ನಪಾನ!
ಆ ಕ್ರೂಜೆವೃಕ್ಷದಲಿ
ಆಯ್ತೆಮಗೆಂಥ ದಾನ!
ನಮ್ಮ ಮನೆಕದಕೆ
ಆ ರಕ್ತ ತಾಗಿಸಿದ್ದರೆ,
ಸಂಹಾರಿ ಮುಟ್ಟಲಾರ. ಹಲ್ಲೆ
ಲೂಯಾ!

೫೮.

Mel. Christus der ist mein Leben. 149. 14. 23.

೧. ಘಟ್ಟ್ಯಾದ ಬಂಡೆಯಲ್ಲಿ,
ಸಮಾಧಿಯೊಡೆದು,
ಅಮೂಲ್ಯ ಬೀಜವನ್ನು
ಯೊಸೇಫನಿಟ್ಟನು.

೨. ಆ ತೋಟ ಪೃಥ್ವಿಯಲ್ಲಿ
ವಿಶೇಷವಾದದು;
ಸಮಸ್ತ ಬೀಜದೊಳ್ಗೆ
ಆ ಬೀಜ ಶ್ರೇಷ್ಠವು.

೩. ತೃತೀಯ ದಿನದಲ್ಲಿ
ಹೊತ್ತೇರುವಾಗಲು,
ಆ ಬೀಜ ಮೊಳಿತೆದ್ದು,
ಭೂಗರ್ಭ ಬಿಟ್ಟಿತು.

೪. ಆ ದಿನದಲ್ಲಿ ಜೀವ
ಸಾವಿಂದ ಹುಟ್ಟಿತು;
ಆ ದಿನದಲ್ಲಿ ಸಾವು
ಸತ್ತ್ವಹೀನವಾದುದು.

೫. ಸಮಾಧಿಯಲ್ಲಿ ಶೇರಿ,
ಓ ಯೇಸು ಕ್ರಿಸ್ತನೆ,
ನೀ ಜೀವಮಾರ್ಗವನ್ನು
ಪ್ರಸಿದ್ಧಿ ಮಾಡಿದೆ.

೬. ನಿನ್ನಲ್ಲಿ ದೃಢವಾಗಿ
ವಿಶ್ವಾಸವಿಟ್ಟರೆ,
ಸಮಾಧಿಯಲ್ಲಿ ಶೇರ
ನಾನೇತಕಂಜುವೆ?

೭. ಸಮಾಧಿ ದೇಹಕಿನ್ನು
ವಿಶ್ರಾಂತಿಸ್ಥಳವು;
ನನ್ನಾತ್ಮ ಆಚೆ ದಾಟಿ,
ನಿನ್ನೊಡನಿರ್ಪದು.

೮. ನೀ ಮೃತ್ಯುಶಕ್ತಿಯನ್ನು,
ಓ ಕರ್ತ, ಜೈಸಿದೆ;
ನಿನ್ನಲ್ಲಿ ನಾನು ನಂಬಿ,
ವಿಜಯ ಹೊಂದುವೆ.

---

೬೦.

Mel. Jesus meine Zuversicht.
55. 7. 8. 33. 58. 93.

೧. ನಾನು ನಂಬಿ ಕೊಳ್ಳುವ
ನನ್ನ ಕರ್ತ ಬಾಳುತಾನೆ;
ಮೃತ್ಯುರಾಜಭಯವ
ಪರಿಹಾರ ಮಾಡಿದ್ದಾನೆ.
ಗಾಢ ಕತ್ತಲೊಳಗೆ
ನನ್ನ ಬೆಳಕಾತನೆ!

೨. ನಿತ್ಯ ಜೀವದರಸ
ತನ್ನ ಮಾತು ಕೈಕೊಳೋನು;
ಆತ ತನ್ನ ಭಕ್ತನ
ತಾನಿರ್ಪಲ್ಲಿ ಶೇರಿಸೋನು.
ಅಂಗವನ್ನು ತಲೆಯು
ಎಂದು ಬಿಟ್ಟು ಹೋಗದು.

೩. ಆತನೈಕ್ಯದೊಳಗೆ
ಭಕ್ತಿಯಿಂದ ಶೇರುತೇನೆ;
ಆತನಲ್ಲಿ ನಂಬಿಕೆ
ಎಂಬ ಕೈಯನಿಟ್ಟಿದ್ದೇನೆ;
ಕ್ರೂರ ಮೃತಿ ನಮ್ಮನು
ಭೇದ ಮಾಡ ಕೂಡದು.

೪. ಮಾಂಸವಾಗಿ ಹುಟ್ಟಿದೆ;
ಬೇಗ ಬೀಳ್ವೆ ಬೂದಿಯಾಗಿ;
ಅಂತ್ಯ ದಿನ ಬರಲೆ,
ಆತ ನಿತ್ಯ ಜೀವಕಾಗಿ
ಮಣ್ಣಿನಿಂದ ಕರೆದು
ಎಬ್ಬಿಸೋನು ನನ್ನನು.

೫. ಇಲ್ಲಿ ರೋಗ, ದುಃಖವು;
ಅಲ್ಲಿ ಕ್ಷೇಮ, ಸುಖ, ತ್ರಾಣ.
ಇಲ್ಲಿ ಮಣ್ಣು, ಧೂಳಿಯು;
ಅಲ್ಲಿ ದಿವ್ಯ ಮಹಿಮಾನ.
ಇಲ್ಲಿ ಧೂಳಿಯಾದರು,
ಆತ್ಮವಾಗಿ ಏಳ್ವೆನು.

೬. ದೇಹ, ಪಡು ಹರ್ಷವ!

ಯೇಸು ಕ್ರಿಸ್ತನಂಗವಾದಿ.
ನಂಬು! ಬಿಡು ಚಿಂತೆಯ!
ಜೀವಕಾತ ನಿನ್ನ ಹಾದಿ.
ಅಂತ್ಯ ತೂರ್ಯಧ್ವನಿಯು
ಎಬ್ಬಿಸೋದು ನಿನ್ನನು.



## ೬೧.

Mel. Gelobet seyst du, Jesus Christ. 27.

೧. ನೀ, ಕ್ರಿಸ್ತ, ಸತ್ತು ಜೀವಿಸಿ
ಮೃತಿಯನ್ನು ಜೈಸಿದಿ;
ಮೃತೀಲಿ ಬಿದ್ದ ಜನಕೆ
ನೀ ಜೀವ ಕೊಟ್ಟೆ, ಯೇಸುವೆ!
ಹಲ್ಲೆಲೂಯಾ!

೨. ನೀ, ಕ್ರಿಸ್ತ, ಕೃಪೆ ಹಿಡಿದು,
ನಮ್ಮ ಪಾಪ ಮನ್ನಿಸು!
ನಮ್ಮನ್ನು ನಿನ್ನ ಆತ್ಮಕೆ
ವಿಧೇಯ ಮಾಡು, ಕರ್ತನೆ!
ಹಲ್ಲೆಲೂಯಾ!

೩. ಮಹತ್ವವುಳ್ಳ ಕ್ರಿಸ್ತನೇ,
ಪ್ರೀತಿಯುಳ್ಳ ಯೇಸುವೇ,
ಕೃಪಾಳು! ನಾವು ನಿತ್ಯಕು
ನಿನ್ನನ್ನು ಸ್ತುತಿಸೋಣವು!
ಹಲ್ಲೆಲೂಯಾ!

---

## ೬೨.

Mel. Jesu, meine Freude. 148. 81.

೧. ಮೃತ್ಯುಬಂಧದಿಂದ,
ಗೋರಿಯೊಳಗಿಂದ
ಎದ್ದನೇಸುವು.
ಜೈಸಿ ಮೃತಿಯನ್ನು,
ರಾಜಪೀಠವನ್ನು
ಏರಿ, ಕೂತನು.
ಈಗಲೆ
ವಿಶ್ವಾಸಿಗೆ
ನಿತ್ಯ ಜೀವ ಪ್ರಾಪ್ತಿಯಾಯ್ತು,
ಭಯ ಭಂಗವಾಯ್ತು.

೨. ಸೋತು ಹೋಗಿ ಗೆದ್ದಿ,
ಸತ್ತು ಹೋಗಿ ಎದ್ದಿ,
ಜೀವರಾಜನೆ!
ಪಾಪಕಳೆಯೋಣ,
ಸತ್ತು ಬದುಕೋಣ
ಜೀವನೀತಿಗೆ!
ಯೇಸುವೇ,
ನೀನೊಬ್ಬನೇ

ನಮ್ಮ ಗತಿ! ಪಾದಸೇವೆ
ನಿನಗೀಯುತೇವೆ.

೩. ಕರ್ತಗುಂಟು ಪೀಠ;
ಮಹಿಮೇ ಕಿರೀಟ
ಇನ್ನು ನಮ್ಮದೇ!
ಮೃತ್ಯುಕ್ರೂರಶಸ್ತ್ರ
ದೇಹವೆಂಬ ವಸ್ತ್ರ
ತಿವಿಯುತ್ತಲೇ,
ಆತನೆ
ಸ್ವಪ್ರಜೆಗೆ
ಸೂರ್ಯವಸ್ತ್ರ ಕೊಡೊನಲ್ಲಿ,
ದಿವಸುಖದಲ್ಲಿ.



## ೬೩.

Mel. Preis dem Todesüberwinder. 56. a.

೧. ಸ್ತುತಿ ಗೊಲ್ಗಥದ್ರಿಯಲ್ಲಿ
ಸತ್ತ ಮೃತಿಂಜಯಗೆ!
ಸ್ತುತಿ, ಪಾಪಿಕುಲದಲ್ಲಿ
ಕೃಪೆ ಪಟ್ಟ ಯೇಸುವೆ!
ಬಾಳು ನಮ್ಮ ರಾಜನೆ!
ಸತ್ತು ಪುನರ್ಜೀವಿಯಾದ
ಜೀವದಧಿಪತಿಗೆ
ಹಾಡಿರೆಲ್ಲ ಭಕ್ತರೆ!

೨. ಸ್ತೋತ್ರದಲ್ಲಿ ಒಡನಾಡಿ,
ಮನಃಪೂರ್ಣ ಹರ್ಷದಿ
ಮೃತಿಂಜಯಗೀತೆ ಮಾಡಿ,
ಅಡ್ಡ ಬಿದ್ದು, ಹಾಡಿರಿ!
ವಾದ್ಯವೆಲ್ಲ ನುಡಿಸಿ,
ಉಚ್ಚ ಧ್ವನಿಯಿಂದ ಹಾಡಿ,
ಘನವುಳ್ಳ ಕರ್ತಗೆ
ಎಗ್ಗಿರೆಲ್ಲ ಭಕ್ತರೆ!

೩. ನಾ ಸಮಾಧಿ ಬಿಡಲಾಗ,
ನನ್ನ ಪ್ರಿಯ ಯೇಸುವೇ,
ನಿನ್ನ ಮುಖ ನೋಡುವಾಗ,
ದೇಹ ತೇಜವಾಗಲೇ,
ಮಧ್ಯವರ್ತಿಕರ್ತನೇ,
ಹೌದು, ನಾನು ಎಚ್ಚರ್ತಾಗ,
ನಿನ್ನ ಜೀವದೈಕ್ಯಕೆ
ಪೂರ್ಣವಾಗಿ ಶೇರುವೆ!



## ೬೪.

Mel. Saft vom Felsen. 56. b.

೧. ಸ್ತುತಿ ಗೊಲ್ಗಥದ್ರಿಯಲ್ಲಿ
ಸತ್ತ ಮೃತಿಂಜಯಗೆ!
ಸ್ತುತಿ, ಪಾಪಿಕುಲದಲ್ಲಿ
ಕೃಪೆ ಪಟ್ಟ ಯೇಸುವೆ!

ಸತ್ತು ಪುನರ್ಜೀವಿಯಾದ,
ನಮ್ಮ ಯಜಮಾನನಾದ
ಜೀವದಧಿಪತಿಗೆ
ಹಾಡಿರೆಲ್ಲ ಭಕ್ತರೆ!

೨. ಸ್ತೋತ್ರದಲ್ಲಿ ಒಡನಾಡಿ,
ಮನಃಪೂರ್ಣ ಹರ್ಷದಿ
ಮೃತಿಂಜಯಗೀತೆ ಮಾಡಿ,
ಅಡ್ಡ ಬಿದ್ದು ಹಾಡಿರಿ!
ಯೋಗ್ಯ ಸಾಭಿಮಾನದಿಂದ,
ಸ್ತೋತ್ರದುಚ್ಚ ಧ್ವನಿಯಿಂದ
ಘನವುಳ್ಳ ಕರ್ತಗೆ
ಎರ್ಗಿರೆಲ್ಲ ಭಕ್ತರೆ!

೩. ನಾ ಸಮಾಧಿ ಬಿಡಲಾಗ,
ನನ್ನ ಪ್ರಿಯ ಯೇಸುವೇ,
ನಿನ್ನ ಮುಖ ನೋಡುವಾಗ,
ದೇಹ ತೇಜವಾಗಲೇ,
ಹೌದು, ನಾನು ಎಚ್ಚತ್ತರ್ಾಗ,
ನಿನ್ನ ಹತ್ರಕೇರಿದಾಗ,
ನಿನ್ನ ಜೀವದೈಕ್ಯಕೆ
ಪೂರ್ಣವಾಗಿ ಶೇರುವೆ!

---

## f. ಕ್ರಿಸ್ತನ ದಿವಾರೋಹಣದ ಹಬ್ಬ.

೬೫.

Mel. Jesus, meine Zuversicht.
55. 7. 8. 33. 58. 93.

೧. ಇಂದು ಕ್ರಿಸ್ತ ಯೇಸು
ವು
ಶೇರಿ ಪರಲೋಕದಲ್ಲಿ,
ಸರ್ವರಾಜನಾದನು.
ತಂದೆಬಲಗಡೆಯಲ್ಲಿ
ಕೂತು ಕೊಂಡ ರಾಜಗೆ
ಅಡ್ಡ ಬೀಳು, ಪ್ರಜೆಯೆ!

೨. ಎಲ್ಲ ಅಧಿಕಾರವ
ಯೇಸು ಇಹಪರದಲ್ಲಿ
ಹೊಂದಿ, ಸ್ವಂತ ಜನರ
ಆಳುತಾನೆ ಪ್ರೀತಿಯಲ್ಲಿ.
ಶತ್ರು ಶಕ್ತನಾದರು,
ಕೇಡು ಮಾಡಲಾರನು.

೩. ಕೊಡು ನಿನ್ನ ಪ್ರಜೆಗೆ
ನಿನ್ನ ರಾಜ್ಯಸ್ವಾಸ್ಥ್ಯಯನ್ನು;
ನಿನ್ನ ಸಭೆಗೇಸುವೆ
ಕೊಡು ನಿತ್ಯ ಸ್ಥಾನವನ್ನು!
ನೀನು ಜೈಸಿದಂತೆಯೆ
ಜಯ ಕೊಡು ನಮಗೆ!

೪. ನಿನ್ನ ದಿನ ಬಂದರೆ,
ಪೂರ್ಣ ಧೈರ್ಯವಾಗಿದ್ದೇವೆ;
ನಿನ್ನ ಸನ್ನಿಧಾನಕೆ
ಸಿದ್ಧ ಮಾಡಿ ಕೊಳ್ಳುತೇವೆ.
ನಿನ್ನ ಮುಖಕಾಂತಿಯೇ
ನಮ್ಮ ಜೀವ, ಕ್ರಿಸ್ತನೇ!

೬೬.

Mel. Brüder, reicht die Hand zum Bunde. 31.

೧. ಕ್ರಿಸ್ತ ರಾಜ್ಯವಾಳಿ, ಶಾನೆ
ಘನದಿಂದ ಬಾಳುತಾನೆ;
ಆತ ಜಯಶಾಲಿಯು.
ಹರ್ಷವಾಗಿರಾತನಲ್ಲಿ!
ಆತಗಿಹಪರದಲ್ಲಿ
ಎಲ್ಲ ವಶವಹುದು.

೨. ದೂತಸೇನೆ ಭಕ್ತಿ ಗೊಂ
ಡು
ರಾಜಪೀಠ ಸುತ್ತಿ ಕೊಂಡು,
ಮಾಡುತಿಹುದೋಲಗ.
"ನನ್ನ ಬಲಪಾರ್ಶ್ವದಲ್ಲಿ
ಕೂಡ್ರು!" ಎಂತ, ಮಗನಲ್ಲಿ
ತಂದೆ ಮೆಚ್ಚಿ ಹೇಳಿದ.

೩. ತಂದೆ ಏಕ ದೇವರೆಂದು,
ಮಗ ಪಿತೃರೂಪನೆಂದು,
ಭಕ್ತರೆರ್ಗುತಿಹರು.
ಯೇಸುವಲ್ಲಿ ನಿತ್ಯ ಪ್ರಾಣ;
ಯೇಸುವಲ್ಲಿ ಸರ್ವ ತ್ರಾಣ;
ಯೇಸು ವಿಶ್ವರಾಜನು!

೪. ಆತ ಪ್ರಾಯಶ್ಚಿತ್ತವಾಗಿ
ಪಾಪಪರಿಹಾರಕಾಗಿ
ಕ್ರೂಜೆಯಲ್ಲಿ ಸತ್ತನು.
ಆತನಂತ್ಯ ದಿನದಲ್ಲಿ
ಘನವಾಗಿ ಬರುವಲ್ಲಿ
ನಮ್ಮ ನಿತ್ಯ ಜೀವವು!

೫. ಆಗ ತನ್ನ ವಾಕ್ಯವನ್ನು
ನಂಬಿ ಕೊಂಡ ಭಕ್ತರನ್ನು
ಮೋಕ್ಷಸ್ಥಾನಕೊಯ್ವನು.
ಹಶು, ದಾಹ, ದುಃಖ, ಕಷ್ಟ,
ಚಿಂತೆ, ಭೀತಿ, ರೋಗ, ನಷ್ಟ
ಇನ್ನು ಮುಂದೆ ಕಾಣವು.

## ೭. ಪಂಚಾಶತ್ತಿನ ಹಬ್ಬ.

### ೬೨.

Mel. Nun bitten wir den heilgen Geist. 109.

೧. ಆಲೈಸು, ದೇವರ ಆತ್ಮವೆ!
ವಿಶ್ವಾಸದೃಢವ ನಮಗೆ
ದಯೆ ಪಾಲಿಸೀಗ!
ಭೂಕಷ್ಟವನ್ನು
ಬಿಟ್ಟೋಗೊ ಕಾಲದಿ ಭಕ್ತರನ್ನು
ಕಟಾಕ್ಷಿಸೋ!

೨. ಇಂಪಾದ ಬೆಳಕು! ನಮ್ಮಲಿ
ಕ್ರಿಸ್ತೇಸುನಾಮವ ತಿಳಿಸಿ,
ಆತನೈಕ್ಯದಿಂದ
ಸ್ವತಂತ್ರವನ್ನು
ತಕ್ಕೊಳ್ಳ ಬಯ್ಸುವ ಮಕ್ಕಳನ್ನು
ಕಟಾಕ್ಷಿಸೋ!

೩. ಅಮೂಲ್ಯ ಪ್ರೀತಿಯೆ, ನಮ್ಮೊಳು
ಪ್ರೇಮಾಗ್ನಿಜ್ವಾಲೆಯ ಹೊತ್ತಿಸು!
ಸರ್ವ ಭಕ್ತರಲ್ಲಿ
ಅನ್ಯೋನ್ಯವನ್ನು
ಪ್ರವೃದ್ಧಿ ಪಡಿಸಿ, ಸಭೆಯನ್ನು
ಕಟಾಕ್ಷಿಸೋ!

೪. ಓ ನೀನೆ ಶಾಂತಿಯ ಬುಗ್ಗೆಯು!
ನಿನ್ನಲ್ಲಿ ಕಷ್ಟಕೆ ಅಂಜೆವು.
ನಿನ್ನ ಮರೆಯಲ್ಲಿ
ಭಯನಿವಾರ!
ಐ, ಅಂತ್ಯ ವಿಘ್ನಕು ಮಾಡುದ್ಧಾರ!
ಕಟಾಕ್ಷಿಸೋ!

---

### ೬೩.

Mel. Seelenbräutigam. 29. 35. 36.

೧. ದೇವರಾತ್ಮವೆ,
ಬಂದೆನ್ನೊಳಗೆ,
ಮಾಂಸಮೂಲವನ್ನು ಕಿತ್ತು,
ಮನದೊಳ್ ಸುಬೋಧೆ ಇತ್ತು,
ನನ್ನ ಹೃದಯಾ
ಶುಚಿ ಮಾಡ ಬಾ!

೨. ಬೀಸು, ವಾಯುವೇ!
ಬೀಳು, ಮಳೆಯೇ!

ಕೋಲೆ, ಬಂಡೆಯನ್ನು ಶೀಳು!
ಖಡ್ಗ, ಮಾಂಸದಲ್ಲಿ ಬೀಳು!
ಉರಿ, ಅಗ್ನಿಯೇ!
ಮೂಡು, ಸೂರ್ಯನೇ!

೩. ನನ್ನ ಆತ್ಮದಿ
ಜ್ಞಾನ ಹುಟ್ಟಿಸಿ,
ನನ್ನ ಇಂದ್ರಿಯಂಗಳನ್ನು,
ನನ್ನ ಪೂರ್ಣ ಮನಸನ್ನು
ಹಿಡಿದೆನ್ನನು
ಪೂರ ವ್ಯಾಪಿಸು!

೪. ನೀನು ಬೋಧನೆ
ನನಗಿತ್ತರೆ,
ಜೀವದುಪದ್ರಂಗಳನ್ನು,
ಮೃತಿಘೋರ ಭಯವನ್ನು
ಲಕ್ಷ್ಯ ಮಾಡದೆ,
ಜಯ ಹೊಂದುವೆ.



೭೯.

Mel. Wie schön leucht't uns der Morgenstern. 11.

೧. ಪವಿತ್ರ ದೇವರಾತ್ಮವೇ,
ನೀ ಭಕ್ತಹೃದಸೂರ್ಯನೇ!
ನಮ್ಮೊಳ್ ಪ್ರವೇಶವಾಗು!
ನಮ್ಮಂತರ್ಭಾವದೊಳಗೆ
ಉದ್ಯೈಸಿ, ಎಡೆ ಬಿಡದೆ
ಪ್ರಕಾಶ ಪ್ರದನಾಗು!
ಆತ್ಮ,
ಆತ್ಮ,
ಸತ್ಯ ಜ್ಞಾನ
ನಿನ್ನ ದಾನ;
ನಿನ್ನ ಕಾಂತಿ
ನಮ್ಮ ನಿತ್ಯವಾದ ಶಾಂತಿ!

೨. ಪವಿತ್ರವಾದ ಬುಗ್ಗೆಯೆ,
ಓ ಎರೆ ಆತ್ಮದಾಹಕೆ
ಸಜ್ಜೀವಜಲವನ್ನು!
ನಮ್ಮನ್ನು ಚಂದ ತೊಳದು,
ನಮ್ಮೊಳಗಿಂದ ಬಿಡಿಸು
ಅಸಹ್ಯ ಮಲವನ್ನು!
ಎರೆ,
ಎರೆ
ಪಾನಕಾಗಿ,
ಸ್ನಾನಕಾಗಿ
ಜಲವನ್ನು!
ಕೊಡು ನಿಜ ತೃಪ್ತಿಯನ್ನು!

೩. ಪವಿತ್ರವಾದ ಅಗ್ನಿಯೆ!
ನಮ್ಮೊಳಗಿರ್ವ ಮೈಲಿಗೆ
ಸುಟ್ಟಾಕು ವೇಗದಿಂದ!
ಸೈತಾನನಧಿಕಾರವಂ,

ನಮ್ಮೊಳಗಿರ್ವ ರಾತ್ರಿಯಂ
ನೀ ದಿವ್ಯ ಜ್ವಾಲೆಯಿಂದ
ಭಿನ್ನ
ಭಿನ್ನ
ಮಾಡಲಾಗಿ,
ಸಿದ್ಧರಾಗಿ
ನಿನ್ನ ಸೇವೆ
ಮಾಡ ತ್ವರೆ ಪಡುತೇವೆ.

## h. ತ್ರಿಯೇಕತ್ವದ ಹಬ್ಬ.

### ೭೦.

Mel. Wie schön leucht't uns der Morgenstern. 11.

೧. ಇನ್ನುಂಟೊ ತೃಪ್ತಿ ಆತ್ಮಕೆ
ನೀನಲ್ಲದೇ, ಒ ತಂದೆಯೆ?
ನನ್ನುತ್ತಮಾತ್ಮತೋಷ!
ನಿನ್ನನ್ನು ಬಿಟ್ಟ ಸುಖವು,
ನೀ ಕೊಡದಂಥ ಬೆಳಕು
ಇದ್ದಲ್ಲಿ ಎಂಥ ಪೋಷ?
ಸತ್ಯ
ನಿತ್ಯ
ಸಮಾಧಾನ,
ವಾಸಸ್ಥಾನ
ಪಾಪಗಾರ
ನಿನ್ನ ಹೊರ್ತು ಹೊಂದಲಾರ.

೨. ಇನ್ನುಂಟೊ ತೃಪ್ತಿ ಆತ್ಮಕೆ
ನೀನಲ್ಲದೇ, ಒ ಯೇಸುವೆ,
ಪ್ರಪಂಚಕಾಡಿನಲ್ಲಿ?
ನೀ ನನ್ನ ಬಿಟ್ಟು ಬಿಟ್ಟರೆ,
ನಾ ದಿಕ್ಕು ಕಾಣದಿರುವೆ
ಭೂಪರಲೋಕದಲ್ಲಿ.
ಯೇಸು
ಲೇಸು
ಕೃಪೆಯಾಗಿ
ಕೊಡಲಾಗಿ,
ಇಲ್ಲಿ ಏನು,
ಅಲ್ಲಿ ಏನು ಆಶಿಸ್ಯೇನು?

೩. ಇನ್ನುಂಟೊ ತೃಪ್ತಿ ಆತ್ಮಕೆ
ನೀನಲ್ಲದೇ, ಒ ಆತ್ಮವೆ?
ಒ ಶಾಂತಿಕರ ಮಿತ್ರ!
ನೀ ಜ್ಞಾನತೇಜದಿಂದಲೆ
ಪ್ರಕಾಶ ಕೊಡದಿದ್ದರೆ,
ನಾನಾಗೆನ್ನೈ ಪವಿತ್ರ.

ವರ
ಪರ
ಮಿತ್ರ, ನನ್ನ
ಆತ್ಮವನ್ನ
ಕೃಪೆಯಾಗಿ
ಕಾಯಿ ನಿತ್ಯ ಜೀವಕಾಗಿ!



## ೭೧.

Mel. Gott der Vater wohn uns bei. 96.

೧. ತಂದೆಯಾದ ದೇವರೆ,
ನಮ್ಮಲ್ಲಿ ವಾಸ ಮಾಡು!
ಪಾಪ ಮನ್ನಿಸೆಮಗೆ!
ಆತ್ಮಂಗಳಂ ಕಾಪಾಡು!
ಮುಕ್ತಿ ಕೊಡು, ತಂದೆಯೆ!
ಪಿಶಾಚನನ್ನು ಜೈಸಿ,
ಸದಾ ವಿಶ್ವಾಸವಾಗಿ,
ನಿನ್ನಲ್ಲಿ ನೆಲೆಯಾಗಿ,
ಎಲ್ಲ ಸಭೆಯೊಂದಿಗೆ
ದಿವ್ಯಾಯುಧಂಗಳಿಂದ
ಹೋರಾಟ ತೀರಿಸೋಣ!
ಕಿರೀಟ ಪಡೆಯೋಣ!
ಹಲ್ಲೆಲೂಯಾ! ನಿನ್ನಲೇ
ಸಂರಕ್ಷೆ ಸ್ಥಿರವಾದದೇ!

೨. ಪ್ರಿಯ ಯೇಸು ಕ್ರಿಸ್ತನೆ,
ನಮ್ಮಲ್ಲಿ ವಾಸ ಮಾಡು!
ಪಾಪ ಮನ್ನಿಸೆಮಗೆ!
ಆತ್ಮಂಗಳಂ ಕಾಪಾಡು!
ಮುಕ್ತಿ ಕೊಡು, ಕರ್ತನೆ!
ಪಿಶಾಚನನ್ನು ಜೈಸಿ,
ಸದಾ ವಿಶ್ವಾಸವಾಗಿ,
ನಿನ್ನಲ್ಲಿ ನೆಲೆಯಾಗಿ,
ಎಲ್ಲ ಸಭೆಯೊಂದಿಗೆ
ದಿವ್ಯಾಯುಧಂಗಳಿಂದ
ಹೋರಾಟ ತೀರಿಸೋಣ!
ಕಿರೀಟ ಪಡೆಯೋಣ!
ಹಲ್ಲೆಲೂಯಾ! ನಿನ್ನಲೇ
ಸಂರಕ್ಷೆ ಸ್ಥಿರವಾದದೇ!

೩. ಪರಿಶುದ್ಧ ಆತ್ಮವೆ,
ನಮ್ಮಲ್ಲಿ ವಾಸ ಮಾಡು!
ಪಾಪ ಮನ್ನಿಸೆಮಗೆ!
ಆತ್ಮಂಗಳಂ ಕಾಪಾಡು!
ಮುಕ್ತಿ ಕೊಡು ಆತ್ಮವೆ!
ಪಿಶಾಚನನ್ನು ಜೈಸಿ,
ಸದಾ ವಿಶ್ವಾಸವಾಗಿ,
ನಿನ್ನಲ್ಲಿ ನೆಲೆಯಾಗಿ,
ಎಲ್ಲ ಸಭೆಯೊಂದಿಗೆ
ದಿವ್ಯಾಯುಧಂಗಳಿಂದ

ಹೋರಾಟ ತೀರಿಸೋಣ!
ಕಿರೀಟ ಪಡೆಯೋಣ!
ಹಲ್ಲೆಲೂಯಾ! ನಿನ್ನಲೇ
ಸಂರಕ್ಷೆ ಸ್ಥಿರವಾದದೇ!

---

೭೨.

Mel. Gott der Vater wohn uns bei. 96.

೧. ತಂದೆಯಾದ ದೇವರೆ,
ನಮ್ಮಲ್ಲಿ ವಾಸ ಮಾಡು!
ಪಾಪ ಮನ್ನಿಸೆಮಗೆ!
ಆತ್ಮಂಗಳಂ ಕಾಪಾಡು!
ಮುಕ್ತಿ ಕೊಡು, ತಂದೆಯೆ!
ಪಿಶಾಚನನ್ನು ಜೈಸಿ,
ಸದಾ ವಿಶ್ವಾಸವಾಗಿ,
ನಿನ್ನಲ್ಲಿ ನೆಲೆಯಾಗಿ,
ಎಲ್ಲ ಸಭೆಯೊಂದಿಗೆ
ದಿವ್ಯಾಯುಧಂ ಕೊಳೋಣ!
ಹೋರಾಟ ತೀರಿಸೋಣ!
ಕಿರೀಟ ಪಡೆಯೋಣ!
ಹಲ್ಲೆಲೂಯಾ! ನಿನ್ನಲೇ
ಸಂರಕ್ಷೆ ಸ್ಥಿರವಾದದೇ!

೨. ಕರ್ತ, ಯೇಸು ಕ್ರಿಸ್ತನೆ,
ನೀ ಸರಿಯಾದ ಹಾದಿ.
ಸತ್ಯ ದೇವವಾಕ್ಯವೆ!
ನೀನೆಮ್ಮ ಮರೆಯಾದಿ.
ನೀನು ಸತ್ತು ನಮಗೆ
ರಕ್ಷೆ ಮಾಡಿ ಕೊಟ್ಟೆ.
ನಿನ್ನಲ್ಲಿ ಜೀವಕಾಂತಿ;
ನಿನ್ನಲ್ಲಿ ಸತ್ಯ ಶಾಂತಿ;
ನೀನು ದಿವದನ್ನವೆ;
ನಿನ್ನಲ್ಲಿ ನೀತಿಜ್ಞಾನ;
ನೀನೆಮ್ಮ ಯಜಮಾನ;
ನೀನೆಮ್ಮ ಸಮಾಧಾನ.
ಶುದ್ಧ ಕನ್ಯಾಪುತ್ರನೆ,
ಅನಂತ ಸ್ತೋತ್ರ ನಿನಗೆ!

೩. ಪಿತಾಪುತ್ರರೊಂದಿಗೆ
ಸಮಾನವಾದ ಮಾನ
ಹೊಂದ ತಕ್ಕ ಆತ್ಮವೆ,
ತಾರೈ ವಿಶ್ವಾಸದಾನ!
ಚಿಂತಾಕ್ರಾಂತ ಆತ್ಮಕೆ
ನೀ ಕೊಡು ಕ್ಷೇಮವನ್ನು!
"ಓ ಅಪ್ಪ, ತಂದೆ, ಕೇಳು!"
ಎನ್ನಲ್ಕೆ ಬುದ್ಧಿ ಹೇಳು!
ಸತ್ಯವೃದ್ಧಿಕಾರ್ಯಕೆ
ಸದಾ ಸಹಾಯ ಮಾಡು!
ಸದ್ಭಕ್ತರಂ ಕಾಪಾಡು!
ಸೈತಾನಗೆದುರಾಡು!

ಹಲ್ಲೆಲೂಯಾ! ಆತ್ಮವೆ,
ನಿವಾಸಿಸೆಮ್ಮ ಒಳಗೆ!



## ೭೩.

Mel. Wir glauben all' an Einen Gott. 110.

೧. ನಾವೇಕ ದೇವರಲ್ಲಿಯೆ
ಏಕವಾಗಿ ನಂಬುತೇವೆ;
ತ್ರಿಯೇಕನೆಂಬ ಕರ್ತಗೆ
ಒಪ್ಪಲೀಗ ನಮ್ಮ ಸೇವೆ!
ತಂದೆ ಎಲ್ಲವುಂಟು ಮಾಡಿ,
ಸರ್ವರಾಜ, ಸರ್ವತ್ರಾಣಿ
ಪರಿಶುದ್ಧ ಸರ್ವಜ್ಞಾನಿ
ಆಗಿ, ಸೃಷ್ಟಿಯಂ ಕಾಪಾಡಿ,
ಈ ಲೋಕವನ್ನು ರಕ್ಷಿಸ
ಆದೀಲಿ ಮನ ಮಾಡಿದ. ಆಮೆ
ನ್!

೨. ನಾವೇಸು ಕ್ರಿಸ್ತನಲ್ಲಿಯು
ನಂಬುತೇವೆ, ಭಕ್ತರಾಗಿ.
ಸ್ವಕೀಯ ತಂದೆಗೀತನು
ಆದಿಯಿಂ ಸಮಾನನಾಗಿ,
ಶುದ್ಧಳಾದ ಕನ್ಯೆಯಿಂದ
ಹುಟ್ಟಿ ಸದ್ಮನುಷ್ಯನಾಗಿ,
ಕೆಟ್ಟು ಹೋದ ನಮಗಾಗಿ
ಸತ್ತು, ಗೋರಿಯೊಳಗಿಂದ
ಎದ್ದೇರಿ, ಘನದೊಡನೆ
ಬರೋನು ನ್ಯಾಯದಿನಕೆ. ಆ
ಮೆನ್!

೩. ಪವಿತ್ರ ಆತ್ಮದಲ್ಲಿಯು
ತದ್ವಿಶ್ವಾಸವಿಡುತೇವೆ;
ಈತಂಗು ದೇವಭಾವವು;
ಬೇಕು ಈತಗೆಮ್ಮ ಸೇವೆ!
ಹೃದ್ವಿಶ್ರಾಂತಿಯೆಂಬ ದಾನ
ಭಕ್ತಗೀತ ಕೊಡಲಾಪ,
ಅಳಿಸೋನು ನಮ್ಮ ಪಾಪ;
ಆತನಿಂದ ದೇಹೋತ್ಥಾನ.
ಓ ಭಕ್ತಗಣವೇ, ಸದಾ
ಯೆಹೋವಸ್ತೋತ್ರ ಮಾಡು
ವಾ! ಆಮೆನ್!



# IV. ಸಭೆಯ ಆಚರಣೆಗಳಿಗೆ ತಕ್ಕ ಗೀತಗಳು.

## a. ಸುವಾರ್ತೆಯ ಪ್ರಸಂಗ.

### ೭೪.

Mel. Freu dich sehr, o meine Seele. 63. 75. 150.

೧. ಕರ್ತ, ನೋಡು! ಭೂಮಿಯಲ್ಲಿ
ಎಷ್ಟೋ ಅಂಧಕಾರವು!
ಬೆಳ್ಕು ಗಾಢ ಕತ್ತಲಲ್ಲಿ
ಸ್ವಲ್ಪ ಮಾತ್ರ ಕಾಣ್ಬುದು.
ಎಷ್ಟೋ ಜನ ಭ್ರಮಿಸಿ,
ಸತ್ತ ಬೊಂಬೆಗೆರಗಿ,
ದಿಕ್ಕು ತಪ್ಪಿ ಹೋಗಿದ್ಧಾರೆ,
ವ್ಯರ್ಥ ಶ್ರಮ ಪಡುತಾರೆ!

೨. ಎಂದು ಹೋಗೊದಂಧಕಾರ?
ಎಂದು ಸೂರ್ಯನೇರ್ವನು?
ಎಂದು ಶುಭ ಸಮಾಚಾರ
ಬೆಳಕನ್ನು ಹೊಯ್ವದು?
ಸತ್ಯ ಜ್ಞಾನ ಮರೆತು
ಮೂರ್ಖರಾದ ಜನರು
ನಿನಗೆಂದು ವಂದಿಸ್ಯಾರು?
ಕ್ಷೇಮವೆಂದು ಪಡೆದಾರು?

೩. ಏಳು! ಪಾಪಹೊರೆಯನ್ನು
ತೆಗೆ, ಕೃಪೆಯರಸೇ!
ರಾತ್ರಿಪರಿಹಾರವನ್ನು
ಮಾಡು, ನೀತಿಸೂರ್ಯನೇ!
ನಿನ್ನ ವಾಕ್ಯ ಬೇಗವೇ
ಕಳುಹೆಮ್ಮ ಕರ್ತನೇ!
ಹೆಣ ಜೀವಿಯಾಗ ಮಾಡು!
ಸುಡು ಪಾಪಭ್ರಾಂತಿಕಾಡು!

೪. ಕರ್ತ, ಕೊಡು ಸಿದ್ಧಿಯನ್ನು
ನಿನ್ನ ಸೇವಾಜನಕೆ!
ಕೊಡು ಒಳ್ಳೆ ಫಲವನ್ನು
ಸತ್ಯದಿಂಪು ನುಡಿಗೆ!
ಪರಿಪೂರ್ಣ ಜಯಕೆ
ಮಾರ್ಗ ಮಾಡು, ಕರ್ತನೆ!
ನಿನ್ನ ತ್ರಾಣ ಕುಂದೊದಿಲ್ಲ;
ನಿನ್ನ ರಾಜ್ಯಕಂತ್ಯವಿಲ್ಲ!



೭೫.

Mel. Wach auf, du Geist der ersten Zeugen. 157. 82.

೧. ಚೀಯೋನುಕೋಟಿ ಗೋಡೆಯಲ್ಲಿ
ನಿಂತ್ಹಗಲಿರುಳಲ್ಲಿ ಕೂಗುವ,
ಆರಂಭಸಾಕ್ಷಿಯವರಲ್ಲಿ
ಬಲಿಷ್ಠವಾಗಿ ಕೇಳ್ದ ಕೃಪೆಯ
ದಿವ್ಯಾತ್ಮ, ಏಳು! ದೇವತೂರ್ಯವೆ,
ಘಟ್ಟ್ಯಾಗಿ ಊದು ಜಗತೊಳಗೆ!

೨. ನಿನ್ನಗ್ನಿಸರ್ವಲೋಕದಲ್ಲಿ
ಪ್ರಜ್ವಾಲೆಯಾದರೆಷ್ಟೊ ಒಳ್ಳೆದು!
ಸಂರಕ್ಷೆ ಎಲ್ಲ ಜನರಲ್ಲಿ
ಪ್ರಖ್ಯಾತಿಯಾದರೆಂಥ ಸೌಖ್ಯವು!
ಓ ಬೆಳೆಯಜಮಾನ, ದೃಷ್ಟಿಸು!
ಪೈರೆಷ್ಟೊ! ಎಷ್ಟೊ ಕೊಂಚ ಆಳ್ಗಳು!

೩. ಸುವಾರ್ತೆ ಸಾರೊ ಶೂರರನ್ನು
ಗುಂಪಾಗಿ, ಕರ್ತ, ಇನ್ನು ಕಳುಹು!
ಈಯ್ ತ್ವರೆಯಾಗಿ ಜಯವನ್ನು!
ಸೈತಾನರಾಜ್ಯ ಬೇಗ ಭಂಗಿಸು!
ಭೂಚಕ್ರದಲ್ಲಿ ಕಟ್ಟಿ ರಾಜ್ಯವ!
ನಿನ್ ಹೆಸರೆತ್ತು ಬೇಗ, ಒಡೆಯ!

೪. ಸುವಾರ್ತಾಸೂರ್ಯತೇಜ ಮೂಡಿ,
ದುಷ್ಟಾಂಧ ಸೇನೆಯೆಲ್ಲ ಜೈಸಲಿ!
ಗುಂಪಾಗಿ ಜನರೆಲ್ಲ ಕೂಡಿ,
ನಿನ್ನಡಿ ಶೇರಲನುನಯದಿ!
ನಿದ್ದೇಲಿ ಬಿದ್ದ ಬ್ರಾಮ ಸಂತತಿ
ಸ್ವರಾಜತೂರ್ಯ ಕೇಳಿ ಏಳಲಿ!

೫. ನಿನ್ನಗ್ನಿಯಿಂದ ನಮ್ಮ ಪ್ರೀತಿ
ಹೊತ್ತಿರ್ವ ಚಿಕ್ಕ ಅಗ್ನಿಬಿಂದುವೇ.
ನಿಂಗಿರ್ವ ಮಮಕಾರರೀತಿ
ಅತುಲ್ಯ! ನೀನು, ದೇವ, ಪ್ರೀತಿಯೇ!
ನಮ್ಮಲ್ಲಿ ಬೇಡೊ ಪ್ರೀತಿ ಸಣ್ಣದು;
ಅನಂತ ನಿನ್ನ ಪ್ರೀತಿಕಾರ್ಯವು!

೬. ಪೂರೈಸು ನಿನ್ನ ಕಾರ್ಯ
ವನ್ನು,
ಭೂಲೋಕನ್ಯಾಯದೀಶ, ರ
ಕ್ಷಕ!
ಮನುಷ್ಯಜಾತಿವ್ಯಥೆಯನ್ನು
ವಿಮೋಚಿಸೈ, ವಿಶುದ್ಧ ಒಡೆ
ಯ!
ವಿಶ್ವಾಸ ಬಿನ್ನೈಸಲ್ಕೆ ಮಾಣ
ದು.
ಭಾಷಾಶೆ ವಿಾರಿ ಕೊಟ್ಟು, ಸ
ಲುಹು!

——◆——

## ೭೬.

Mel. Alle Menschen müssen sterben. 38. 39. 56.b. 64.

೧. ದೇವರೇ, ಸುವಾರ್ತೆಯ
ನ್ನು
ಕೇಳ ಕೂಡಿ ಬಂದೆವು.
ಒಳ್ಳೆ ಆಶೀರ್ವಾದವನ್ನು
ಕೊಡು ಪ್ರತಿ ಭಕ್ತಗು!
ಜೀವವುಳ್ಳ ರೊಟ್ಟಿಯನ್ನು
ಹಂಚಿ, ಜೀವಜಲವನ್ನು
ಪಾನಕಾಗಿ ಎರೆದು,
ಆತ್ಮ ತೃಪ್ತಿ ಪಡಿಸು!

೨. ಆದಿಪಿತೃಪಾಪದಿಂದ
ಶಾಪಗ್ರಸ್ತರಾದೆವು;
ಸ್ವಂತ ಪಾಪಸೇವೆಯಿಂದ
ಮೃತಿ ಪ್ರಾಪ್ತವಾಯಿತು.
ತಿಳುಕೊಂಬ ಮನಸನ್ನು,
ಕೇಳಿಕೊಂಬ ಕಿವಿಯನ್ನು,
ನೋಡಿ ಕೊಂಬ ಕಣ್ಣನು,
ಕ್ರಿಸ್ತ, ದಯೆ ಪಾಲಿಸು!

——◆——

## ೭೭.

Mel. Gott sey Dank in aller Welt. 12. 19. 21. 61.

೧. ದೇವಸನ್ನಿಧಾನಕೆ
ಶೇರ ಬನ್ನಿರೆಲ್ಲರೆ!
ಆತ್ಮಕಿಂಪು ಶಾಂತಿಯ
ಆತನಿಂದ ಬೇಡುವ!

೨. ಆತನಡಿಯೆಡೆಗೆ
ನಾವು ಶೇರಿ ಬಂದರೆ,
ಆತನೆಮ್ಮ ಹತ್ತರ
ಬಂದು ವಾಸ ಮಾಡುವ.

೩. ಆತ ಕೊಟ್ಟ ದಾನಕೆ
ತಕ್ಕದೆಮ್ಮ ಸ್ತೋತ್ರವೆ!
ನಮ್ಮ ಹೃದಯಂಗಳ
ಆತಗಿತ್ತು ಬಿಡುವ!

೪. ಧರ್ಮ, ನೋಂಪು, ಜಾತ್ರೆಯು
ಏನು ಫಲ ಕೊಡವು;
ಯೇಸು ಕ್ರಿಸ್ತನಿಂದಲೆ
ಮೋಕ್ಷ ಪ್ರಾಪ್ತಿಸುತ್ತದೆ.

೫. ಮೂರ್ತಿವಿಗ್ರಹಂಗಳು
ನಮಗೇನು ಕೊಡವು;
ಜೀವವುಳ್ಳ ದೇವರೇ!
ನಿನ್ನ ಸೇವೆ ಸುಖವೇ!

೬. ದೇವಪುತ್ರಯೇಸುವು
ನಮ್ಮ ಒಂದೆ ಗತಿಯು.
ನಿನ್ನ ಸತ್ಯ ಸೇವೆಗೆ
ತ್ರಾಣ ಪಾಲಿಸೆಮಗೆ!

---

## ೭೮.

Mel. Meinen Jesum lass ich nicht. 93. 7. 8 33. 55. 58.

೧. ಪ್ರಿಯ ದೇವವಾಕ್ಯವೆ,
ಯೋಗ್ಯ ಸ್ತೋತ್ರ ನಿನಗೇನು?
ನಿನ್ನ ಹಾಲು ಕುಡಿಪೆ,
ನಿನ್ನ ಮನ್ನ ಭಕ್ಷಿಸ್ಯೇನು.
ಕ್ಷೇಮಕರ ಔಷಧಿ
ನಮ್ಮ ಆತ್ಮಕೀಯುತಿ.

೨. ನೀನು ಶತ್ರುಬಾಣವ
ಹಿಂದಕ್ಕಾಕುವಂಥ ಡಾಲು;
ನೀನು ದಿವ್ಯ ಖಡುಗ;
ನನ್ನ ಕೈಗೆ ಶ್ರೇಷ್ಠ ಪಾಲು;
ನೀನು ಉಕ್ಕಿಗಿಂತಲು
ಯುದ್ಧದಲ್ಲಿ ಹದವು.

೩. ಎಷ್ಟೊ ರತ್ನ, ಸಾಗರ,
ನಿನ್ನ ಮಡುವೆಡೆಯಲ್ಲಿ!
ಎಷ್ಟೊ ಹೊನ್ನು, ಪರ್ವತ,
ನಿನ್ನ ಗರ್ಭಗೃಹದಲ್ಲಿ!
ಹೊಲ, ನಿನ್ನ ಬೆಳೆಯು
ಪೊಟ್ಟು ಸೂಡು ಇಲ್ಲದ್ದು!

೪. ರಮ್ಯವಾದ ವನವೆ,
ಶ್ರೇಷ್ಠ ಹೂವು ಮಿಂಚೊ ತೋಟ!
ನಿನ್ನಲುಂಟು ನನಗೆ
ಒಳ್ಳೆ ಶ್ರುತಿ, ಒಳ್ಳೆ ನೋಟ.
ಭಾರ ಹೊರೆಯಿಲ್ಲಿಗೆ
ಹಾಕಿ, ಸುಖಿಯಾಗುವೆ.

೫. ಬೆಳಕುಳ್ಳಾಕಾಶವೆ!
ನಿನ್ನ ನಕ್ಷತ್ರಂಗಳಿಂದ
ಇಹದಂಧದೊಳಗೆ
ಕಾಂತಿಯಾಗುವದರಿಂದ
ಲೋಕಕಾಡಿನೊಳಗೆ
ದಾರಿ ನಂಗೆ ಶಿಕ್ಕುತೆ.

೬. ಪ್ರಿಯ ದೇವವಾಕ್ಯವೆ,
ಕಷ್ಟದಲ್ಲಿ ನೀನೆ ಶಾಂತಿ;
ಲೋಕದಲ್ಲಿ ಕತ್ತಲೆ
ಹೆಚ್ಚುವಾಗ, ನೀನೆ ಕಾಂತಿ;
ಅಂತ್ಯ ಶ್ವಾಸ ಹೋಗಲು,
ನೀನೆ ನನ್ನ ಧ್ಯಾನವು!

೭೯.

L. M. Old Hundreth.
131. 24. 44. 45. 130. 132.

೧. ಭೂಲೋಕವೆಲ್ಲ ಕರ್ತಗೆ
ಉತ್ಸಾಹಧ್ವನಿ ಎತ್ತಲಿ!
ಆತಂಗೆ ಹರ್ಷದೊಡನೆ
ಸ್ತೋತ್ರಾದಿಸೇವೆ ಮಾಡಿರಿ!

೨. ಸರ್ವೇಶನೆಮ್ಮದೇವರು;
ನಾವಾತನ್ನಸ್ತಕೃತ್ಯವು.
ಬಾ, ಹಿಂಡೆ! ಎಂತ, ನಮ್ಮನು
ಕಾಪಾಡಿ, ಮೇಯ್ಸುತಿರ್ಪನು.

೩. ಹೆಬ್ಬಾಗಿಲಂ ಪ್ರವೇಶಿಸಿ,
ಪ್ರಾಕಾರವೆಲ್ಲ ತುಂಬಲು,
ಸಂತೋಷಸ್ತೋತ್ರ ಹಾಡಿರಿ!
ಇದೆಮ್ಮ ಯುಕ್ತ ಸೇವೆಯು.

೪. ಸರ್ವೋಪಕಾರಿ ಆತನೆ;
ಯಾವಾಗ್ಯು ಕೃಪಾಪೂರ್ಣನು.
ನಿಲ್ಲೋದನಂತ್ಯ ಕಾಲಕೆ
ಯೆಹೋವ ಕೊಟ್ಟ ವಾಕ್ಯವು!

೮೦.

S. M. Ps. 67. To bless thy chosen race. 126. 128.

೧. ಸ್ವಕೀಯ ಪ್ರಜೆಯ
ಓ ಕರ್ತ, ಸಲಹು,
ಸ್ವಮುಖದಿಷ್ಟ ತೇಜವ
ಭಕ್ತರ್ಗೆ ಮೂಡಿಸು!

೨. ಓ ಯೇಸು, ಒಡೆಯಾ,
ನೀನೆಮ್ಮ ಜೀವವು!
ವಿಮುಕ್ತ ಸಭೆ ಸರ್ವಥಾ
ಹೊಸನ್ನ ಹಾಡೊದು.

೩. ಸಮಸ್ತ ಲೋಕವು
ಹೃದ್ಹರ್ಷಸ್ತೋತ್ರದಿ
ನಿಂಗೈಯ್ಯ ಸರ್ವ ಕಾಲಕು
ಸಂಸೇವೆ ಮಾಡಲಿ!

## b. ಸ್ನಾನವು.

### ೮೧.

Mel. Christ unser Herr zum Jordan kam. 89.

೧. "ಸರ್ವಾಧಿಕಾರ ನನ್ನದೇ
ಭೂಪರಲೋಕದಲ್ಲಿ!
ಸುವಾರ್ತೆ ಸಾರಿ, ಶಿಷ್ಯರೇ,
ಸಮಸ್ತ ಸೃಷ್ಟಿಯಲ್ಲಿ,
ಪಿತಾಪುತ್ರಾತ್ಮನಾಮದಿ
ತಂದಿಕ್ಕಿ ಸ್ನಾನವನ್ನು,
ಕೈಕೊಳ್ಳಲಿಕ್ಕೆ ಮಾಡಿರಿ
ನಾ ನಿಮಗೇಳಿದ್ದನ್ನು!"
ಎಂಬಾಜ್ಞೆ ಯೇಸು ಕೊಟ್ಟ.

೨. ಈ ಆಜ್ಞೆಗನುಸಾರವು
ಈಗಹುದಿಲ್ಲಿ ಸ್ನಾನ.
ಓ ಯೇಸು, ದಯೆ ಪಾಲಿಸು
ಪವಿತ್ರ ಆತ್ಮದಾನ!
ಈ ಅಂಗವನ್ನು ಶೇರಿಸಿ
ನಿನ್ ಸಭೆಕಾಯದಲ್ಲಿ,
ಈ ಕುಡಿಯನ್ನು ನಿನ್ನಲಿ
ಅಂಟಿಕ್ಕು, ನಿಜ ಬಳ್ಳಿ!
ಈ ಕುರಿಯನ್ನು ಕಾಯಿ!

### ೮೨.

Mel. Liebster Jesu, wir sind hier. 90.

೧. ಸ್ನಾನ ಹೊಂದಿದವನ,*
ಪ್ರಿಯ ಯೇಸುವೇ, ಕಾಪಾಡು!
ನಿನ್ನ ಪ್ರಜೆಯರಿಯ
ರಾಜ್ಯವನ್ನು ಹೀನ ಮಾಡು!
ಸಭೆಯೆಂಬ ರಾಜ್ಯವಾಳು!
ಜಯಶಾಲಿಯಾಗಿ ಬಾಳು!

೨. ಹೇಳಿ ಕೊಟ್ಟ ಹೆಸರಂ†
ನಿನ್ನ ಹಸ್ತದಲ್ಲಿ ಬರೆ!
ಚೀಯೋನ್ ಪಟ್ಟಣವನಂ,‡
ಜೀವ ತೀರಿದಾಗ, ಕರೆ!
ನಂಬಿ ಕಂಡ ಜನವಲ್ಲಿ
ಹರ್ಷಿಸೋದು ನಿತ್ಯದಲ್ಲಿ.

---

* ಅಥವಾ — ಹೊಂದಿದವಳ,
ಅಥವಾ — ಹೊಂದಿದವರ.
† ಅಥವಾ — ಕೊಟ್ಟ ಹೆಸರೆಲ್ಲವಂ.
‡ ಅಥವಾ — ಪಟ್ಟಣವಳಂ,
ಅಥವಾ — ಪಟ್ಟಣವರಂ.



## c. ಮತಸ್ಥಾಪನೆಯು.

### ೮೩.

Mel. Stärk' uns, Mittler, dein sind wir. 46.

೧. ತ್ರಾಹಿ, ಮಧ್ಯವರ್ತಿಯೇ,
ನಿನ್ನ ಭಕ್ತರನ್ನು!
ಕಾಯಿ, ಸರ್ವನಾಥನೇ,
ನಿನ್ನ ಸಭೆಯನ್ನು!
ನಿನ್ನಲ್ಲಿ ನಂಬುತೇವೆ;
ನೀನೆಮ್ಮ ಯಜಮಾನನು,
ನಾವು ನಿನ್ನ ದಾಸರು.
ದಿವ್ಯ ನಿರ್ಮಾಣಿಕ,
ದಿವ್ಯ ಮಧ್ಯಸ್ಥನೇ, [ತ,
ಬೋಧಕನೇ, ಸಂಧೈರ್ಯದಾ
ಓ ರಕ್ಷಕನೇ,
ಜೀವದನ್ನಪಾನ
ದಯೆ ಪಾಲಿಸೆಮಗೆ,
ಕಟಾಕ್ಷ ಮಾಡಿ!

೨. ನಮ್ಮ ಪ್ರಾಯಶ್ಚಿತ್ತಕೆ
ನಿನ್ನ ಪ್ರಾಣ ಬಿಟ್ಟು,
ನಿನ್ನ ರಕ್ತ ಚಲ್ಲಿದೆ,
ಪ್ರೀತಿ ನಮ್ಮಲಿಟ್ಟು;
ನೀನೆಮ್ಮ ಶಿಕ್ಷೆ ಹೊತ್ತಿ;
ನಮ್ಮನ್ನು ಕನಿಕರಿಸಿ
ಕ್ರೂಜೆಯಲ್ಲಿ ತೀರಿದಿ.
ದಿವ್ಯ ನಿರ್ಮಾಣಿಕ,
ದಿವ್ಯ ಮಧ್ಯಸ್ಥನೇ, [ತ,
ಬೋಧಕನೇ, ಸಂಧೈರ್ಯದಾ
ಓ ರಕ್ಷಕನೇ,
ಪಾಪಪರಿಹಾರ
ದಯೆ ಪಾಲಿಸೆಮಗೆ,
ಕಟಾಕ್ಷ ಮಾಡಿ!

೩. ನಿತ್ಯ ಜೀವರಾಜನೆ,
ಎದ್ದು ಗೋರಿಯಿಂದ,
ಮೃತಿಯನ್ನು ಜೈಸಿದೆ
ದಿವ್ಯ ತ್ರಾಣದಿಂದ.
ನಿನ್ನಲ್ಲಿ ನಮ್ಮ ಜೀವ.
ಪಾತಾಳಲೋಕಕಿಳಿದಿ,
ದಿವಕೇರಿ ಬಾಳುತಿ.
ದಿವ್ಯ ನಿರ್ಮಾಣಿಕ,
ದಿವ್ಯ ಮಧ್ಯಸ್ಥನೇ, [ತ,
ಬೋಧಕನೇ, ಸಂಧೈರ್ಯದಾ
ಓ ರಕ್ಷಕನೇ,
ನಮ್ಮ ಆತ್ಮವನ್ನು
ಮೃತಿಯಿಂದ ತಪ್ಪಿಸು,
ಕಟಾಕ್ಷ ಮಾಡಿ!



## d. ರಾತ್ರಿಭೋಜನವು.

### ೮೪.

Mel. Wachet auf! ruft uns die Stimme. 47.

೧. ಕರ್ತ, ನಮ್ಮ ಮಧ್ಯದಲ್ಲಿ
ಬಂದಿರು! ನಿನ್ನ ಬಳಿಯಲ್ಲಿ
ಸಂತೃಪ್ತಿ ಹೊಂದ ಬಂದೆವು.
ಕೊಡು ಪರಿಹಾರವನ್ನು!
ವಿಶ್ವಾಸವಿಡುವವರನ್ನು,
ಐ, ಮೃತ್ಯುವಿಂದ ರಕ್ಷಿಸು!
ಓ ಯೇಸು, ಎಂದಿಗು
ನೀನೆಮ್ಮ ಅರಸು!
ಆಮೆನ್! ಆಮೆನ್!
ಎದ್ದಾಗಲೆ
ನಿನ್ನೊಡನೆ
ಕೂಡ್ರೋಣ ನಿನ್ನ ಮೇಜಿಗೆ!

೨. ಯೇಸು ದಿವ್ಯ ಕೃಪೆಯಾ
ಗಿ
ಕೊಟ್ಟಂಥ ರೊಟ್ಟಿ ಜೀವಕಾಗಿ
ವಿನಯದಿಂದ ತಿನ್ನಿರಿ!
ಜೀವವುಳ್ಳ ಪಾತ್ರೆಯಲ್ಲಿ
ಕುಡೀರಿ! ನಿತ್ಯ ರಾಜ್ಯದಲ್ಲಿ
ಸ್ವತಂತ್ರ ನಿಮಗಿರಲಿ!
ಸತ್ಪೋಗುವನಕ
ಹಿಡೀರಿ ಕರ್ತನ!
ಆಮೆನ್! ಆಮೆನ್!
ಹಾದಿಕ್ಕಟ್ಟಿ!
ಆ ಊಟಕ್ಕೆ
ಕೂತಾರು ಸ್ವಲ್ಪ ಜನರೆ.

---

### ೮೫.

Mel. Schmücke dich, o liebe Seele!

೧. ನನ್ನ ಪ್ರಾಣ, ಶೋಭೆ
ಗೊಂಡು,
ಪಾಪವನ್ನು ಅಗ್ಲಿ ಕೊಂಡು,
ಬಾರೊ, ಶುದ್ಧ ಬೆಳಕಾಗಿ!
ಮೆರ್ಯ ಬೇಕು ಮೈಮೆಯಾ
ಗಿ!
ಕಂಡ್ಯ, ಕರ್ತನೊಲ್ಮೆಯಲ್ಲಿ
ಕರ್ಯುತಾನೆ ಊಟಕಲ್ಲಿ.
ವಿಶ್ವವಾಳುವಾತ ತಾನೆ
ನಿನ್ನಲಿರ ಬಂದಿಧಾನೆ.

೨. ಮಿತ್ರರಂತೆ ನೀ ಮುಂ
ಕೊಳ್ಳು;
ನಿನ್ನ ಕರ್ತಗೆದ್ರುಗೊಳ್ಳು!
ಆತ ತನ್ನ ಸರ್ವರಿಂಗೂ

ಕಾಣ್ಬನೊಲ್ಮೆಯಲ್ಲಿ ನಿಂಗೂ.
ತೆರ್ದುರ್ ಆತ್ಮದ್ವಾರವನ್ನು,
ಸದ್ವಿಶ್ವಾಸದಿಂದಲನ್ನು:
ಕರ್ತ, ನನ್ನ ಆಶೆ ಬಲ್ಲಿ,
ಶ್ರೇಷ್ಠ ಮಿತ್ರ, ಶೇರೆನಲ್ಲಿ!

೨. ನಿನ್ನ ಪ್ರೇಮಧೊರ್ತುರ್ ನನ್ನ
ಆತ್ಮಕೆಲ್ಲಿ ಸಿಕ್ಕೊದನ್ನ?
ರಾತ್ರಿಭೋಜನಾರ್ಥವಾಗಿ
ಬೇಡುತೇನೆ, ಹಶ್ವಿಯಾಗಿ.
ಎಷ್ಟೊ ಕೋರಿತೆನ್ನ ಪ್ರಾಣ
ಜೀವರಾಜರಕ್ತಪಾನ!
ರೊಟ್ಟಿಪಾನ ಕೊಳ್ಳುವಲ್ಲಿ
ನಂಗೆ ಐಕ್ಯ ಕ್ರಿಸ್ತನಲ್ಲಿ.

೪. ಯೇಸು, ನನ್ನ ಜೀವಕಾಂತಿ,
ಯೇಸು, ನನ್ನ ಹರ್ಷ, ಶಾಂತಿ,
ಯೇಸು, ಆದಿ ಅಂತನಾತ,
ಜೀವಮೂಲ, ತ್ರಾಣದಾತ!
ನನ್ನನೊಳ್ಳೆ ಮೇಲಿಗಾಗಿ,
ನಿನ್ನ ಸ್ವಂತ ಸ್ತೋತ್ರಕಾಗಿ,
ಸ್ವರ್ಗದನ್ನ ತಿನ್ನಿಸಯ್ಯ,
ನಿಂಗೆ ಅಡ್ಡ ಬಿದ್ದೆನಯ್ಯ.

೫. ಕರ್ತ, ದೊಡ್ಡ ಪ್ರೀತಿಯಿಂದ
ಬಂದಿ ಪರಲೋಕದಿಂದ;
ಕೊಟ್ಟೆ ಜೀವ ಪ್ರೀತಿಯಲ್ಲಿ
ನನಗಾಗಿ ಕ್ರೂಜೆಯಲ್ಲಿ;
ಚಲ್ಲಿ ನಿನ್ನ ರಕ್ತವನ್ನು.
ನಿನ್ನ ಮೇಜಿನಿಂದದನ್ನು
ಕೊಂಡು, ಪ್ರೀತಿ ಭಕ್ತರೆಲ್ಲ
ಸ್ಮರ್ಣೆ ಮಾಳ್ಪರ್ ಜೀವವೆಲ್ಲ.

೬. ಯೇಸು, ಸತ್ಯ ಜೀವರೊಟ್ಟಿ!
ಪ್ರೇಮದೂಟ ನೀನೆ ಕೊಟ್ಟೆ.
ನಾನದನ್ನು ವ್ಯರ್ಥವಾಗಿ
ಕೊಳ್ಳ ಬಾರ್ದುರ್ ಕೇಡಿಗಾಗಿ.
ತೋರಿಸೆಂಗೆ ಊಟದಲ್ಲಿ
ಪ್ರೀತಿ ಒಳ್ಳೆ ಅಕ್ಕರೆಯಲ್ಲಿ!
ಇಲ್ಲಿಯಂತೆ ನಿನ್ನ ಅನ್ನ
ಸ್ವರ್ಗದಲ್ಲಿ ತಿನ್ನಿಸೆನ್ನ!

## e. ಮದುವೆಯು.

### ೮೬.

Mel. Wie schön leucht't uns der Morgenstern. 11.

೧. ಅನಂತ ದಿವ್ಯ ಪ್ರೀತಿಯು
ವಿವಾಹ ನೇಮ ಮಾಡಿತು;
ಮನುಷ್ಯಬುದ್ಧಿ ಅಲ್ಲ.
ಸದಾ ದಯಾಳು ತಂದೆಯೆ
ವಿಧೇಯವಾದ ಜನಕೆ
ಸಹಾಯ ಮಾಡ ಬಲ್ಲ.
ಸುಖ
ದುಃಖ
ಕೊಡುವಂಥ,
ತೀರದಂಥ
ಪ್ರೀತಿಯಲ್ಲಿ
ನಂಬಿರಿಹಪರದಲ್ಲಿ!

### ೮೭.

Mel. Nun lob, mein' Seel, den Herren. 116.

೧. ಈ ಗಂಡ ಹೆಂಡರನ್ನು,
ಓ ಕರ್ತ, ಆಶೀರ್ವದಿಸು!
ನೀನವರೈಕ್ಯವನ್ನು
ಕಾಪಾಡಿ, ಕೃಪೆಯಾಗಿರು!
ಈ ಹೊಸ ಮನೆಯಲ್ಲಿ
ಸುಕ್ಷೇಮವನ್ನು ತಾ!
ಈ ಹೃದಯಂಗಳಲ್ಲಿ
ನೀ ವಾಸ ಮಾಡ ಬಾ!
ಈ ನಿನ್ನ ಮಕ್ಕಳನ್ನು,
ಓ ತಂದೆ, ಸಲಹು!
ಆ ಲೋಕಕವರನ್ನು
ಕಡೇಲಿ ಶೇರಿಸು!



# V. ರಕ್ಷಣೀಯ ಕ್ರಮಕ್ಕೆ ತಕ್ಕ ಗೀತಗಳು.

## a. ಮಾನಸಾಂತರವು.

### ೮೮.

Mel. Ach Gott und Herr. 122.

೧. ಓ ದೇವರೇ,
ಅಪಾರವೇ
ನಾ ಗೈದು ಬಂದ ಪಾಪ!
ಸೃಷ್ಟ್ಯೊಳಗೆ
ಯಾರೆನಗೆ
ಸಹಾಯ ಮಾಡಲಾಪ?

೨. ಯಾರಿಂದಲು
ಅದಾಗದು;
ನೀನೊಬ್ಬನೆನ್ನ ತಂದೆ!
ನೀನೆನ್ನನು,
ಐ, ಮನ್ನಿಸು!
ನಿನ್ನಾಸರಕ್ಕೆ ಬಂದೆ.

೩. ಓ ತಂದೆಯೇ,
ಸುದಂಡನೆ
ಬೇಕ್! ಆದರೇಸುವಲ್ಲಿ
ಸಂಧೈರ್ಯವ
ಕೊಟ್ಟಾದರ
ಇಡಂಜುವಾತ್ಮದಲ್ಲಿ!

೪. ನಿನ್ನಲ್ಲಿಯೇ
ವಿಮೋಚನೇ,
ಓ ಕರ್ತ, ದಯೆ ಮಾಡು!
ನಿನ್ನೈಕ್ಯದ
ಸಂತೃಪ್ತಿಯ
ಕೊಟ್ಟಾತ್ಮವಂ ಕಾಪಾಡು!

೫. ಓ ರಕ್ಷಕ,
ನನ್ನಾಸರ
ನಿನ್ನೈದು ಘಾಯದಲ್ಲಿ!
ಅಲ್ಲಿಹುದು
ಸುಕ್ಷೇಮವು
ಸಮಸ್ತ ವ್ಯಥೆಯಲ್ಲಿ.

## b. ನೀತಿನಿರ್ಣಯವು.

### ೮೯.

Mel. Gott ist getreu. 73.

೧. ಈಗೀಗಲು
ಸಮಸ್ತ ಶೋಕವ
ನಾ ಬಿಟ್ಟೆನಂಜದೆ;
ಸರ್ವೇಶನು
ಸಂಪೂರ್ಣ ಶಾಂತಿಯ
ತಂದಿತ್ತನೆನಗೆ.
ವಿಶ್ವಾಸದಿಂದ ತೃಪ್ತಿಯನ್ನು,
ಸಂಸ್ಥಿರ ಹೃತ್ಸಂತೋಷವನ್ನು
ನಾ ಹೊಂದಿದೆ.

೨. ಸರ್ವೇಶನು
ನನ್ನನ್ನು ಬಿಡದೆ,
ಈ ಜೀವವಿದ್ದರು,
ಅದ್ಹೋದರು,
ಆಶ್ಚರ್ಯವಾಗಿಯೆ
ಸಂರಕ್ಷಿಸುವನು.

ಕಡೇಲಿ ನಿತ್ಯ ನೀತಿಯನ್ನು,
ಅನಂತವಾದ ಜೀವವನ್ನು
ನಾ ಪಡೆವೆ.

---

## ೯೦.

Mel. Mir ist Erbarmung widerfahren. 26. 120. 146.

೧. ನಾನೀಗ ಭದ್ರ ರೇವಿನಲ್ಲಿ
ತಂದಿಟ್ಟೆ ನನ್ನ ಹಡಗ;
ಕ್ರಿಸ್ತೇಸುರಕ್ತಘಾಯದಲ್ಲಿ
ಹಾಕಿಟ್ಟೆ ನನ್ನ ಲಂಗರ.
ಭೂಪರಲೋಕ ಬಿದ್ದರು,
ನಾನೇನು ಭಯ ಪಡೆನು.

೨. ಯೆಹೋವನನುಗ್ರಹವನ್ನು
ಯಾರಾರು ಶೋಧಿಸಾರರು;
ಆ ಅನುಗ್ರಹ ಪಾಪಿಯನ್ನು
ಕಟಾಕ್ಷಿಸೋದು ನಿತ್ಯಕು.
ಪಾಪಿಷ್ಠನೆಡವಿದರು,
ದಿವ್ಯಾನುಗ್ರಹ ತೀರದು.

೩. ನಿತ್ಯಾನುಗ್ರಹಪೂರ್ತಿಯಿಂದ
ಕ್ರೂಜೇಲಿ ಯೇಸು ಸತ್ತನು;
ದೇವಾತ್ಮ ಅನುಗ್ರಹದಿಂದ
ನಂಗ್ಹಿತ ಶಿಕ್ಷೆ ಕೊಡೊದು;
ಅನಾದಿಯಿಂದ ತಂದೆಯು
ನಂಗೊಲೆಯುತ್ತಲಿದ್ದನು.

೪. ಪಾಪಂಗಳನ್ನು ತೊಳೆವಂಥ
ಪವಿತ್ರವಾದ ನೆತ್ತರೇ,
ಘಾಯಂಗಳನ್ನು ಕಟ್ಟೆಪಂಥ
ಓ ಪರಿಶುದ್ಧ ಮದ್ದುವೇ,
ದೇವಾನುಗ್ರಹ ನನಗೆ
ನಿನ್ನಿಂದ ಪ್ರಾಪ್ತವಾದದೆ!

೫. ಈ ರಕ್ತದ ಪ್ರವಾಹದಲ್ಲಿ
ವಿಶ್ವಾಸಸ್ನಾನ ಮಾಡುವೆ.
ಈ ನೆತ್ತ್ರ ನನ್ನ ಹಣೆಯಲ್ಲಿ
ಗುರ್ತಾಗಿ ಕಾಣಿಸಿದ್ದರೆ,
ದೇವಾನುಗ್ರಹವೆಂದಿಗು
ನನ್ನನ್ನು ಬಿಡಲಾರದು.

೬. ಈ ಮಾರ್ಗದಲ್ಲಿ ನಡಕೊಳ್ವೆ
ಭೂವಾಸ ಮಾಡೊ ವರೆಗೆ;
ಈ ಮರ್ಮವನ್ನು ಧ್ಯಾನಗೊಳ್ವೆ
ನನ್ನುಸುರಾಡೊ ಕಾಲಕೆ.
ದೇವಾನುಗ್ರಹ ನನಗೆ
ನಿರಂತ್ಯ ನಿಜ ಮುಕ್ತಿಯೆ!

---

## ೮೧.

Mel. Friede, ach Friede. 142.

೧. ಶಾಂತಿಯ, ಶಾಂತಿಯ ಯೇಸುವಿನಿಂದ
ಶುದ್ಧಾತ್ಮದಿ ತಂದೆಯು ಕೊಡುವನು.
ಭಕ್ತರು ಶಾಂತಿಯು ಹೊಂದಿದರಿಂದ
ಕ್ರಿಸ್ತೇಸುವ ಐಕ್ಯದಿ ಹರ್ಷಿಪರು.
ಪ್ರಪಂಚದ ಭೋಗಿಗೆ ಶಾಂತಿಯು ಇಲ್ಲ;
ಸದ್ಭಕ್ತನ ಶಾಂತಿಯು ತೀರುವದಿಲ್ಲ.

೨. ಶಾಂತಿಯ ಅರ್ಥಿಯೆ ಮೊದಲೆ ಆಗಿ
ವಿಶ್ವಾಸಿಸಿ ದೃಷ್ಟಿಸು ಯೇಸುವನು!
ಧ್ಯಾನಿಸು ಯೇಸುವನಚಲವಾಗಿ!
ಅಸಂಹಿಸು ಸ್ವಾರ್ಥದ ಮಾಯೆಯನು!
ಉಂಟೇಸುವ ದಾಸನಿಗುತ್ತಮ ಶಾಂತಿ;
ಯಥಾರ್ಥ ವಿರಾಗಿಗೆ ಸತ್ಯ ವಿಶ್ರಾಂತಿ.

೩. ದುಷ್ಟ ಅನಾಥರ ರಕ್ಷಣೆಗಾಗಿ
ಕ್ರಿಸ್ತೇಸುವು ಶಾಪವ ತಾಳಿದನು;
ಕಳ್ಳರಲಾತನ ತೂಗಿಸಲಾಗಿ,
ಸಂತಾಪ ಅವಾಚ್ಯವೆ ಪೀಡಿಸಿತು.
ಆ ಘಾಯದಿ ಏರಿತು ಶಾಂತಿಯ ಜಲ;
ಆ ಮರದಿ ಹುಟ್ಟಿತು ಶಾಂತಿಯ ಫಲ.

೪. ಶಾಂತಿಯ ರಾಜ, ಕೃತಜ್ಞತೆಯಿಂದ
ನಿನ್ನಾಳುಗಳಾಗುವನಂತರಕು!
ಕ್ರಿಸ್ತೇಸುವಿನಾತ್ಮದ ಖಡುಗದಿಂದ
ನಮ್ಮರಿಗೆ ಯುದ್ಧವ ಮಾಡುವೆವು.
ನಿನ್ನಾಳಿಗೆ, ರಾಜನೆ, ಇರದು ಭಯ;
ನೀನಿದ್ದರೆ, ತಪ್ಪದು ಶಾಂತರ ಜಯ.

೩. ಕರ್ತನು ಶಾಂತಿಯ ಬಂಧನದಿಂದ
ನಮ್ಮಾತ್ಮಗಳೈಕ್ಯವ ಪಡಿಸಲಿ!
ಕರ್ತ, ಅಚಂಚಲ ನಂಬಿಕೆಯಿಂದ
ನಮ್ಮಿರಿಸು ಶಾಂತಿಯ ವಚನದಿ!
ಕಡೇಲಿ ಸುಶಾಂತಿಯ ಪಟ್ಟಣದಲ್ಲಿ
ನಮ್ಮೇರಿಸಿ, ಶೇರಿಸು ಮಹಿಮೆಯಲ್ಲಿ!



## ೯೨.

Mel. Es ist das Heil uns kommen her. 105. 15. 102.

೧. ಸಂರಕ್ಷೆ ಬಂದದೆಮಗೆ
ಬರೇ ಕಟಾಕ್ಷದಿಂದ.
ಉಂಟಾಗದೆಂದು ಪ್ರಾಣಕೆ
ಸಹಾಯ ಕ್ರಿಯೆಯಿಂದ.
ವಿಶ್ವಾಸ ಕಾಣ್ಬುದೇಸುವ;
ಕೊಂಡ್ಹೋದನೀತ ಶಾಪವ;
ಮಧ್ಯಸ್ಥನೀತನಾದ.

೨. ದಿವ್ಯಾಜ್ಞೆ ಸಾಧಿಸೋದಕೆ
ಸಮರ್ಥರಾರು ಇಲ್ಲ;
ಹೀಗಾಗಿ ಬಂದ ವ್ಯಥೆಗೆ
ಪ್ರಮಾಣವಿರಲಿಲ್ಲ.
ದಿವ್ಯಾಜ್ಞೆಗಾತ್ಮ ಮೆಚ್ಚದೆ,
ಮಾಂಸಾಶೆಯೊಳಗಿರಲೆ,
ನಾವೆಲ್ಲ ಕೆಟ್ಟಿವೈಯ್ಯ!

೩. ದೇವಾಜ್ಞೆಗನುಗೊಳ್ಳಲು
ಸಾಮರ್ಥ್ಯ ಸ್ವೇಚ್ಛೆಯಲ್ಲಿ
ಉಂಟೆಂಬ ಮೋಸ ಹಬ್ಬಿತು
ಮರ್ಳಾದ ನರರಲ್ಲಿ.
ನಮ್ಮೊಳಗಿರ್ವ ದುರ್ಗತಿ
ಕಣ್ಣಾರೆ ತೋರ್ವ ಕನ್ನಡಿ!
ಎಂಬಂತೆ ದೇವರಾಜ್ಞೆ.

೪. ದುರ್ಭಾವ ಸ್ವಂತ ಶಕ್ತಿಯಿಂ
ಬಿಡೋದಸಾಧ್ಯವಾಯ್ತು;
ದುಷ್ಕರ್ಮ ವ್ಯರ್ಥ ಯತ್ನದಿಂ
ಭೂವಿಾಲಿ ಮಿಗಿಲಾಯ್ತು.
ಅಸತ್ಯ ಪುಣ್ಯ! ಶಪಿತ
ನರಂಗೆ ಪಾಪಕಲ್ಮಷ
ಸಜಾತವಾದ ದೋಷ.

೫. ಆದಾಗ್ಯು ನೇಮ ನಡಿಸ
ಯಾರಿಲ್ಲದಿರಲಾಗಿ,
ಮನುಷ್ಯರೆಲ್ಲ ಕೆಡದ
ಹಾಗವತಾರವಾಗಿ

ಕ್ರಿಸ್ತೇಸು ಹುಟ್ಟೆ ನಮ್ಮಲಿ,
ಬಂದೆಲ್ಲವನ್ನು ನಡಿಸಿ,
ದೇವೋಗ್ರ ಶಾಂತಿ ಗೈದ.

೬. ಓ ಪ್ರಿಯ ಕರ್ತ, ಯೇ
ಸುವೇ,
ನೀನೆಲ್ಲ ಸಾಲ ತೆತ್ತೆ!
ನೀ ಸತ್ತು ಹೋದ್ದರಿಂದಲೇ
ನಾ ಸಾವಿನಿಂದ ಎದ್ದೆ.
ಸಾನಿನ್ನು ಮೇಲೆ ನಿನಗೆ
ಸದ್ಭಕ್ತಿಯಿಂದ ನಡೆವೆ.
ನೀ ಮುಕ್ತಿಯನ್ನು ಕೊಡು!

---

## c. ಪರಿಶುದ್ಧತ್ವವು.

### ೯೩.

Mel. Nicht eine Welt. 144.

೧. ಅಸ್ಥಿರ ಲೋಕ ಬೇಡವೆ
ನಗೆ!
ಪ್ರಪಂಚವನ್ನಶ್ರದ್ಧೆ ಮಾಡುತೇ
ನೆ.
ಅಬದ್ಧ ಕೀರ್ತಿ ನನಗೇತಕೆ?
ಯಾನ್ ಕ್ರೈಸ್ತ; ಮೋಕ್ಷಾಸಕ್ತ
ನಾಗಿದ್ಧೇನೆ.

೨. ರಾಜಾಧಿರಾಜ ಯೇಸು
ಕ್ರಿಸ್ತನು
ನನ್ನರಸೆಂತ, ಅಡ್ಡ ಬೀಳುತೇನೆ.
ವಿಶ್ರಾಂತಿರಾಜ ನನ್ನ ಅರಸು;
ಯಾನ್ ಬಂಟ; ಹೌದು, ಕ್ರೈಸ್ತ
ನಾಗಿದ್ಧೇನೆ.

೩. ಬಾ! ನಮ್ಮ ಕೂಡಿ ಭೋ
ಗ ಮಾಡಿ ಕೋ!
ಎಂತ್ತಂಗಿಸುತ್ತೆ ಲೋಕಭ್ರಾಂ
ತಸೇನೆ.
ಆ ಕೂಗು ಬಿಡಿ! ನಿಮ್ಮ ಕೇಳ
ಲೋ?
ನಾನೇಸುಪಾದದಲ್ಲಿ ಕೂಡ್ರು
ತೇನೆ.

೪. ಕೈಸಂನೆ, ಕಣ್ಣುಸಂನೆ
ನೋಡೆನು!
ನಿಮ್ಮಲ್ಲಿ ಇದ್ದರೆನ್ನ ಮಾರ್ಗ
ಬೇರೆ,
ನಿಮ್ಮಾಶೆ ಭುಕ್ತಿ; ಮುಕ್ತಿ ನನ್ನ
ದು.
ಯಾನ್ ಕ್ರೈಸ್ತ; ನಿಮ್ಮ ಮರು
ಳಲ್ಲಿ ಶೇರೆ.

೫. ಅರಿಷ್ಟನೆಂಗೆ ಕಷ್ಟ ಬಹಳ;
ಕಣ್ಣೀರು ಹಾಕಿ ಯಾತ್ರೆ ಮಾ
ಡುತೇನೆ.
ಇದೇನು? ಕ್ರಿಸ್ತ ಹೆಚ್ಚು ತಾಳಿ
ದ!
ಯಾನ್ ಕ್ರೈಸ್ತ; ಕ್ರಿಸ್ತಜೊತೆಯ
ಲ್ಲಿದ್ಧೇನೆ.

೬. ಹೋರಾಟ ಬಹು ಉ
ಗ್ರವಹುದು;
ಆದಾಗ್ಯು ಜಯ ನಂಗೆ ತಪ್ಪೊ
ದಿಲ್ಲ.
ಈ ಜೀವ ತೀರೆ, ಸುಖಿಯಹೆನು.
ಯಾನ್ ಕ್ರೈಸ್ತ; ನಂಗೆ ಮೃತಿ
ಭಯವಿಲ್ಲ.

೭. ಅನಂತಜೀವಸೂರ್ಯ
ಮೂಡಲು,
ಉತ್ಥಾನಸೈನ್ಯದಲ್ಲಿ ನಾನು ಇ
ರ್ವೆ;
ಸಮಾಧಿಯಿಂದ ಹಾರಿ ಏಳ್ವೆನು.
ಯಾನ್ ಕ್ರೈಸ್ತ; ನಿತ್ಯವಾಗಿ
ಬಾಳುತಿರ್ವೆ.

---

## ೯೪.

Mel. Fahre fort, Zion, fahre fort im Licht. 83.

೧. ಚೀಯೋನೇ, ಚೀಯೋ
ನೇ,
ನೀನು ದೇವಸಭೆಯು!
ಇಕ್ಕಟ್ಟಾದ ದ್ವಾರದಿಂದ
ಶೇರಿ, ಧೈರ್ಯವಾಗಿರು!
ನೆಟ್ಟಗಾದ ಹಾದಿಯಿಂದ
ನಡೆ, ಏನು ಬೇಸರಾಗದೆ,
ಮುಂದಕೆ! ಮುಂದಕೆ!

೨. ಚೀಯೋನೇ, ಚೀಯೋ
ನೇ,
ಪರಿಶುದ್ಧ ಪಟ್ಟವೆ!
ಪಡ ಬೇಡ ಚಿಂತೆಯನ್ನು
ದುಷ್ಟಲೋಕಹಿಂಸೆಗೆ!
ಮುಂದಿನಾ ಕಿರೀಟವನ್ನು
ಸದ್ವಿಶ್ವಾಸದಿಂದ ಎಂದಿಗು
ದೃಷ್ಟಿಸು! ದೃಷ್ಟಿಸು!

೩. ಚೀಯೋನೇ, ಚೀಯೋ
ನೇ,
ನೀನು ದೇವಗೃಹವು!
ಪಾಪಮಲಕಲೆಯೊಂದು
ನಿನ್ನಲಿರ ಬಾರದು.
ಯೇಸು ನಿನಗಾಗಿ ನೊಂದು,

ತನ್ನ ಜೀವವನ್ನು ಸುಮ್ಮಗೆ
ಕೊಟ್ಟನೆ? ಕೊಟ್ಟನೆ?

೪. ಚೀಯೋನೇ, ಚೀಯೋನೇ,
ನೀ ಪವಿತ್ರ ಕನ್ಯೆಯು!
ಯೇಸು ತನ್ನ ರಕ್ತವನ್ನು
ನಿನಗಾಗಿ ಹೊಯ್ದನು.
ನಿತ್ಯ ರಾಜ್ಯಸ್ವಾಸ್ಥಿಯನ್ನು
ನಿಂಗನಾದಿ ತಂದೆ ದೇವರು
ಕೊಟ್ಟನು, ಕೊಟ್ಟನು.

೫. ಚೀಯೋನೇ, ಚೀಯೋನೇ,
ನೀನು ಜಯಶಾಲಿಯು!
ಯೇಸುವೆಂಬ ವೀರನನ್ನು
ನಂಬಿ, ಧೈರ್ಯವಾಗಿರು!
ನಿನ್ನ ರಣಭೂಮಿಯನ್ನು
ಬಿಡಧೋರನಾಡು! ಜಯವು
ನಿನ್ನದು! ನಿನ್ನದು!

---

## ೯೫.

Mel. Warum sollt ich mich denn grämen. 18. 37. 86.

೧. ದೇವಪುತ್ರಮೂಲವಾಗಿ
ನಮಗೆ
ರಕ್ಷಣೆ
ಬಂದು ಇರಲಾಗಿ,
ಇನ್ನು ಬೇಡ ಪಾಪಸೇವೆ!
ನಿನಗೆ,
ಯೇಸುವೆ,
ಒಪ್ಪಿ ಕೊಳ್ಳುತೇವೆ.

೨. ನಾವು ದಾಸರಾದ ಕಾಲ
ತೀರಿತು;
ಕ್ರಿಸ್ತನು
ತೆತ್ತನೆಮ್ಮ ಸಾಲ.
ಯೇಸು ಬಲಹೀನನಲ್ಲ;
ಭಕ್ತರ
ರಕ್ಷೆಯ
ಪೂರ್ಣ ಮಾಡ ಬಲ್ಲ.

೩. ನಮಸ್ಕಾರ ಮಾಡುತೇವೆ,
ಕರ್ತನೆ,
ನಿನಗೆ!
ನಿನ್ನದೆಮ್ಮ ಸೇವೆ!
ಇಹಜೀವದಂತ್ಯದಲ್ಲಿ
ನಮ್ಮನು
ಏರಿಸು
ಚೀಯೋನ್ ಗಿರಿಯಲ್ಲಿ!

---

೯೬.

Mel. Es glänzet der Christen inwendiges Leben. 153.

೧. ಮೈಬಣ್ಣವು ಕರಿದು ಬಿಸಲಿನಿಂದ,
ಸತ್ಕ್ರೈಸ್ತರ ಆತ್ಮವು ಮಿಂಚುವದು.
ಮಹೋನ್ನತನವರಿಗೊಲುಮೆಯಿಂದ
ಕೊಟ್ಟೊಡವೆ ಪರರು ಅರಿಯರು.
ಮನುಷ್ಯನ ಜ್ಞಾನ,
ಮನುಷ್ಯನ ಧ್ಯಾನ
ಎಂದೆಂದಿಗು ಹೊಂದದ ಪರಮ ದಾನ
ಯೆಹೋವನು ಇವರಿಗಿತ್ತಭಿಮಾನ!

೨. ಈ ಲೋಕದಿ ಹೊರಗೆ ಬಡವರಾಗಿ,
ಉನ್ಮತ್ತರ ಹಾಸ್ಯವ ತಾಳುವರು.
ಆಂತರ್ಯದಿ ಕೃಪೆಯ ನಿಧಿಗಳಾಗಿ,
ಕ್ರಿಸ್ತೇಸುವಿಗಾಗೊರು ಮುಡಿಗಳು.
ಮಹಾ ದಿನದಲ್ಲಿ,
ದುಷ್ಟಾರಿಗಳಲ್ಲಿ
ಹೋರಾಡಿದ ಬಳಿಕ, ಮಹಿಮೆಯಲ್ಲಿ
ಪ್ರವೇಶಿಸಿ, ಹರ್ಷಿಪರರಸನಲ್ಲಿ.

೩. ಹೀಗಾದರು, ಕ್ರೈಸ್ತರು ಮಾನವರಾಗಿ,
ಆದಾಮನ ಹೋಲಿಕೆ ಕಾಣಿಸೊರು;
ಪಾಪಿಷ್ಠರ ಅಂದದಿ ದೇಹಿಗಳಾಗಿ,
ಬೇಕಾಗಲು ಕುಡಿದು ಉಣ್ಣುವದು;
ಕೀಳಾಳುಗಳಾಗಿ,
ಸಾಧಾರಣವಾಗಿ
ಉದ್ಯೋಗದಿ ಬಾಳೊರು ನಂಬಿಕೆಯಾಗಿ,
ಪ್ರಪಂಚದ ಭೋಗಕೆ ಹೇಸುವರಾಗಿ.

೪. ಆಂತರ್ಯದಿ ದೇವರ ವಚನದಿಂದ
ಅಮೂಲ್ಯ ಸ್ವಭಾವವು ಜನಿಸಿತು;
ಪ್ರಕಾಶಿಪುದಮಲ ಬೆಳಕಿನಿಂದ

ಸದ್ಭಕ್ತರ ಹೃತ್ತಿನ ಕನ್ನಡಿಯು.
ಹೃಚ್ಚಿಂತೆಯ ತ್ಯಾಗ,
ಸತ್ಪುತ್ರರ ಭಾಗ
ಯೆಹೋವನು ಕೊಟ್ಟದು. ಹೀ
ಗಿರುವಾಗ
ದ್ಯುಪೀಠಕೆ ಏರುವದುತ್ಸಹರಾ
ಗ.

೫. ಈ ಪೃಥ್ವಿಯಲಿದ್ದರು,
ದ್ಯುಚರರಾಗಿ,
ನಿತ್ರಾಣದಿ ಕಾಯುವರಿಳೆಯ
ನು;
ಭೂಕಾಳಗದೊಳಗು ಶಾಂತ
ರು ಆಗಿ,
ಬೇಡ್ಯುಣ್ಣುವ ಧನಿಗಳೆನ್ನಿಸೊ
ರು.
ಸ್ವಭಾವದ ಕ್ಷಯ
ವಿಶ್ವಾಸದ ಜಯ!
ಶರೀರದ ಭೋಗಕೆ ಬಪ್ಪುದು
ಲಯ;
ಜೀವಾತ್ಮದ ತೃಪ್ತಿಯು ದೇವ
ರ ದಯ.

೬. ಕ್ರಿಸ್ತೇಸು! ಪವಿತ್ರ ಪ್ರಕಾ
ಶದ ಧೊರೆ!
ಅಗೋಚರ ಜೀವದ ಒಡೆಯ
ನೆ!
ನೀ ನಮಗೆ ಕೊಡುವ ಕ್ರೂಜಿ
ಯ ಹೊರೆ
ಕುರೂಪವ ಮಾಡಲವಯುವ
ಕೆ!
ಇಲ್ಲ್ಯಡಗಲಾಗಿ,
ನೀನರಸನಾಗಿ
ಬಪ್ಪಾಗಲೆ ಮಹಿಮೆಯರಸ
ರಾಗಿ,
ನಿನ್ನಲ್ಲಿಯೆ ಇರ್ವೆವನಂತರವಾ
ಗಿ.

---

## ೧೨.

Mel. Es kostet viel. 138. 141.

೧. ಸತ್ಕ್ರೈಸ್ತಧರ್ಮ ಕಷ್ಟವು;
ದುರ್ಲಭ್ಯವಾದ್ದು ಶುದ್ಧ ಆತ್ಮ
ನೀತಿ.
ಕ್ರಿಸ್ತೇಸುವೊಡ ನಿತ್ಯ ಸಾಯೊ
ದು
ಸ್ವಭಾವಬುದ್ಧಿಗೊಪ್ಪದಂಥ ರೀ
ತಿ.
ಈ ಯುದ್ಧದಲ್ಲಿ ಒಂದೆ ಜಯವು
ಸಾಕಾಗದು.

೨. ಹಾದೀಲಿ ಹಾವ ಜಾಳಿಗೆ
ನಿನ್ನಡಿ ಕಚ್ಚಲಾಗಿ, ಪ್ರಾಣಲ
ಯ

ನಿವಾರಿಸೋದು ಕಷ್ಟವಾದದೆ!
ಉಂಟ್ಹಗಲಿರುಳಲ್ಲಿ ವಿಷಭಯ;
ತಾತ್ಸಾರ ಮಾಡೆ, ನಷ್ಟ ತಪ್ಪದು.
ಓ ಎಚ್ಚರು!

**೩.** ಈ ಕಷ್ಟಕಂಜ ಬಾರದು.
ಅನಂತ್ಯ ದಿವ್ಯ ಶ್ರೇಯಸಾದ ಭಾರ
ಕಡೇಲಿ ನಿನ್ನದೇ! ವಿಶ್ವಾಸಿಯು
ಹೋರಾಡಿ ಬೇಗ ಸೋತು ಹೋಗಲಾರ.
ಸಾಮರ್ಥ್ಯವನ್ನು ದಿವ್ಯ ಕೃಪೆಯೆ
ಈಯುತ್ತದೆ.

**೪.** ಸರ್ವೇಶಪುತ್ರನೆನ್ನಿಸಿ,
ಮಹಾಪ್ರಕಾಶಪ್ರತಿಕಾಂತಿಯಾಗಿ,
ವಿಶುದ್ಧತೇಜದೇಹಿಯಾಗುವಿ,
ಅನಾದಿಪ್ರಭೆ ನಿನ್ನೊಳೆಸಲಾಗಿ.
ಸಾರೂಪ್ಯನಾಗಿ ತಂದೆಯೈಕ್ಯದಿ
ಇದ್ದಿರುವಿ.

**೫.** ಆ ಲೋಕದಲ್ಲಿ ಮುಕ್ತಿಯ
ಮಗಂಗೆ ತಂದೆ ಇಟ್ಟು ಕೊಂಡಿದ್ಧಾನೆ;
ಅಪಾರವಾದ ಮಾನಭಾರವ
ಭಕ್ತಂಗೆ ಆತ ಸಿದ್ಧ ಮಾಡುತಾನೆ.
ಕಿರೀಟವನ್ನು ಭ್ರಾತಗೀಯ್ವನು
ಕ್ರಿಸ್ತೇಸುವು.

**೬.** ಎಚ್ಚತ್ತು, ಏಳು, ಮನವೇ!
ಪ್ರಪಂಚಭ್ರಾಂತಿ ಇನ್ನು ನಿನಗ್ಯಾಕೆ?
ಬೇಕಾದ ತ್ರಾಣವಾತ ಕೊಡನೇ?
ಅಧೈರ್ಯವಾದ ಅವಿಶ್ವಾಸವ್ಯಾಕೆ?
ಈ ಕಷ್ಟ ತೀರೆ, ಎಷ್ಟೊ ಒಳ್ಳೆದು
ವಿಶ್ರಾಂತಿಯು!

—❦—

## ೯೮.

Mel. Es ist nicht schwer ein Christ zu sein. 141. 138.

**೧.** ಸತ್ಕ್ರೈಸ್ತಧರ್ಮ ಸೌಖ್ಯವೆ!
ಸುಲಭ್ಯವಾದ್ದು ಶುದ್ಧ ಆತ್ಮನೀತಿ.

ಕ್ರಿಸ್ತೇಸುವಿಂಗೆ ಸಾಯೊ ಕಟ್ಟಳೆ
ಸ್ವಭಾವಬುದ್ಧಿಗೊಪ್ಪದಂಥ ರೀತಿ
ಆದಾಗ್ಯು, ದೇವಕೃಪೆ ಎಂದಿಗು
ಸೋತ್ಹೋಗದು.

೨. ಬಾಲಂಗೆ ಚಿಂತೆ ಬೇಡವು!
ಸತ್ಪ್ರೀತಿನೇಮ ಕೆಟ್ಟ ನೊಗವಲ್ಲ.
ಅಧೈರ್ಯ ನಿನಗ್ಯಾಕೆ? ನೆನಸು!
ತಾಯ್ಯನ್ನು ಮಗು ಪ್ರೀತಿ ಮಾಡ ಬಲ್ಲ.
ಈ ಭಯ ಬಿಡು! ನಿನ್ನ ಕಷ್ಟವು
ಹೆಚ್ಚಾಗದು.

೩. ಕೃಪಾಬ್ಧಿ ಹೊಯ್ಯ ತಂದೆಯು
ನಿನ್ ಹೃದವನ್ನು ಕೇಳಿ ಕೊಳ್ಳುತಾನೆ.
ಸ್ವಚಿತ್ತ ಮಾತ್ರ ನಿನ್ನ ಕಾಡ್ಪುದು;
ನಿನ್ನಪ್ಪ ಪ್ರೀತಿಪೂರ್ಣನಾಗಿದ್ದಾನೆ.
ಸ್ವಚಿತ್ತಭ್ರಾಂತಿ ಹೋಗೆ, ತೊಂದರೆ
ಬಿಟ್ಹೋಗುತೆ.

೪. ಪ್ರಜ್ವಾಲೆ ಗೊಂಡ ಚಿಂತೆಯ
ಹೃದ್ಗೃಹದಿಂದ ಕಿತ್ತು ಬಿಸುಟಾಡು!
ಭಯಾದಿ ವೈರಿಗಳ ಸಂಗಡ
ನೀನೆದೆ ಗೊಂಡು ದೃಢ ಹೋರನಾಡು!
ಕಟಾಕ್ಷವಿಡು! ಎನ್ನಲಾಯಿತು
ಇಷ್ಟಾರ್ಥವು.

೫. ಸಹಾಯ ಕಾಣದಿದ್ದರು,
ನೀ ಬೇಗ ಬಿಡ ಬೇಡ ತಾಳ್ಮೆಯನ್ನು!
ನಿಃಶಕ್ತಿಗಾಗಿ ನೀನು ಬೀಳಲು,
ಓ, ಹಿಡುಕೊಳ್ಳು ಹೊಸ ಧೈರ್ಯವನ್ನು!
ಸಂಪೂರ್ಣ ಕ್ಷಮ, ನಂಬು, ಕೊಟ್ಟದೆ
ವಿಶ್ವಾಸಿಗೆ!

೬. ಕಾರ್ಗತ್ತಲೆದ್ದು ಸುತ್ತಲು,
ವಿಶ್ವಾಸದಿಂದಲಿರ್ವ ಭದ್ರವಾಗಿ.

ತುಫಾನು ಬಂದರೇನು? ತಂದೆ
ಯು
ನಿನ್ನನ್ನು ಕಾಯುತಾನೆ ಪ್ರೀತಿ
ಯಾಗಿ.
ವಿಶ್ವಾಸಿಸಕ್ಷಿ ಕಾಣಧೋದರು
ವಿಶ್ವಾಸಿಸು!

೭. ಮೂಡೀತು ಹೊಸ ಬೆಳ
ಕು.
ಸಂರಕ್ಷೆಯಿಷ್ಟ ತೇಜವನ್ನು ಕಾ
ಣ್ಬೆ.
ನಾನೀಯುತೇನೆ! ಎಂತ, ತಂ
ದೆಯು
ನಿಂಗ್ಹೇಳಿದ್ದೆಲ್ಲ ಹೊಂದಿ, ನೋ
ಯ ಮಾಣ್ಬೆ.
ಓ ಎಂಥ ಹರ್ಷ, ನೋಡು,
ಮನವೆ,
ಸತ್ಕ್ರಿಸ್ತಗೆ!

೮. ಏಳೇಳು, ತಡ ಮಾಡದೆ!
ಆಶ್ರೈಸು, ಪುತ್ರ, ನಿಜ ಪಿತನನ್ನು,
ಸಂದೇಹವೆಲ್ಲ ಬಿಟ್ಟು, ಹೃದವೆ!
ಶೇರ್, ಶೇರು ಭಕ್ತಿಯಿಂಪು
ಶಾಂತಿಯನ್ನು!
ಬಾ! ಚಿಂತಾಭಾರ ಒಪ್ಪಿಸಂಜ
ದೆ
ನಿನ್ನೀಶಗೆ!

---

೮೮.

Mel. Mache dich, mein Geist, bereit. 134.

೧. ಸಿದ್ಧನಾಗು! ಪ್ರಾರ್ಥಿಸು!
ನಿದ್ರೆ ತಿಳಿದೇಳು!
ಘಕ್ಕನಾಪತ್ಕಾಲವು
ಬಂದರೇನು? ಹೇಳು!
ಕಾಣದೆ
ಶೋಧನೆ
ಮುತ್ತಿ ಬಹುದಲ್ಲ?
ಹೊತ್ತು ಯಾರು ಬಲ್ಲ?

೨. ಈಗಲೀಗಲೆಚ್ಚರು
ಪಾಪನಿದ್ರೆಯಿಂದ!
ಅಲ್ಲಿ ತಪ್ಪ ಕೂಡದು
ಘೋರ ಶಾಪದಿಂದ.
ಕಟ್ಟೆಯು
ತುಂಬಲು,
ಪರಿಹಾರವಿಲ್ಲ;
ಆಚೆ ಕ್ಷಮೆಯಿಲ್ಲ!

೩. ಎಚ್ಚರಕ್ಷಿ ತೆರೆದು
ಕಾಣ್ಬೆ ಕ್ರಿಸ್ತನನ್ನು.
ನಿದ್ರಾಲೋಲ ನೋಡನು
ದಿವ್ಯ ಬೆಳಕನ್ನು.
ದೇವರ

ಕೃಪೆಯ
ವ್ಯರ್ಥ ನಿದ್ರೆಗಾರ
ಎಂದು ಹೊಂದಲಾರ.

೪. ಎಚ್ಚರಾಗು! ಕೆಡಕ
ಹೊಂಚಿ ಕೊಳ್ಳುತಾನೆ;
ನಿನ್ನ ನುಂಗಿ ನಶಿಸ
ಸಿದ್ಧನಾಗಿದ್ಧಾನೆ.
ಎಚ್ಚರ
ಪಡುವ
ಭಕ್ತ ಜಯಿಸೋನು,
ಜೀವ ಪಡೆಯೋನು.

೫. ದುಷ್ಟ ಮಿತ್ರಗೆಚ್ಚರು!
ಉರ್ಲನೊಡ್ಡಿದ್ಧಾನೆ.
ಎಚ್ಚರಾತ್ಮಶತ್ರುವು
ಸುತ್ತು ಕಾಯುತಾನೆ.
ಎಚ್ಚರು!
ಹುಟ್ಟೊದು
ಮೋಸ ಕ್ಷಣದಲ್ಲಿ
ನಿನ್ನ ಎದೆಯಲ್ಲಿ.

೬. ನಿದ್ರೆ ಬಿಟ್ಟು ಪ್ರಾರ್ಥಿಸು
ನಿನ್ನ ದೇವರನ್ನು!
ಆತ ರಕ್ಷೆ ಮಾಡೊನು
ಬೇಡುವವನನ್ನು.
ಬೇಡದೆ
ಇದ್ದರೆ
ನಿಂಗೆ ಗತಿ ಇಲ್ಲ.
ಗರ್ವಿ ಬಾಳೊದಿಲ್ಲ!

೭. ಬೇಡುತೆಚ್ಚರ್ತಿರೊದು!
ಬೇಡಿ, ಕಷ್ಟ ಮಾಡು!
ಬೇಡಿ, ಉಂಡು, ಮಲಗು!
ಬೇಡಿ, ಹೋರನಾಡು!
ಒಡೆಯ
ಬೇಡುವ
ಭಕ್ತಗೇ ದಯಾಳು.
ಬೇಡಿ, ಬೇಡಿ, ಬಾಳು!



# VI. ಬಿನ್ನಹದ ಗೀತಗಳು.

## ೧೦೦.

Mel. Warum sollt ich mich denn grämen. 18. 37. 86.

೧. ಆಗೊದೆಂದು, ಐ, ಸಹಾ
ಯ?
ನಿತ್ಯಕು
ತೀರದು
ಈ ಪ್ರಪಂಚಮಾಯ!
ರಕ್ತ ಸೋರುವಂಥ ಘಾಯ
ಹೊಂದಿದೆ;
ಸುಮ್ಮನೆ
ಕಳಕೊಂಡೆ ಪ್ರಾಯ.

೨. ತಾಗಿತೆನಗಾ ಸೈತಾನ
ಬಾಣವು;
ಹೋಯಿತು
ಆತ್ಮಸಮಾಧಾನ;
ಸಾಯುತೇನೆ, ಅನ್ನಪಾನ
ಇಲ್ಲದೆ.
ಕರ್ತನೆ,
ಕೊಡು ಒಂದು ದಾನ!

೩. ಕ್ರಿಸ್ತ, ನನ್ನ ಜೀವ ಕ್ಷಯ
ಅಹುದು;
ಹುಟ್ಟಿತು
ನರಕಾಗ್ನಿಭಯ.
ಮಾಂಸದಾಶೆ ಪೂರ್ಣ ಲಯ;
ಕೋರಿಕೆ
ಒಂದದೆ—
ಯೇಸು, ನಿನ್ನ ದಯ!



## ೧೦೧.

Mel. Jesu hilf siegen, du Fürste des Lebens. 80.

೧. ಆತ್ಮದ ಶತ್ರುವು ವಂಚನೆ
ಯಿಂದ
ನಮಗೆ ಶೋಧನೆ ಮಾಡುವ
ನು;
ಇರುಳು ಹಗಲು ಮೋಸಗಳಿಂ
ದ
ಅವನು ಕಷ್ಟವ ಪಡಿಸಲು,
ಯೇಸುವೆ, ತ್ರಾಹಿ, ಪ್ರಕಾಶವ
ಚಲ್ಲಿ
ಸುತ್ತಲು ಮುಚ್ಚುವ ಕತ್ತಲೆ
ಯಲ್ಲಿ!

೨. ನಮಗೆ ಯೌವನಪಾಪ
ಗಳಿಂದ
ಆತ್ಮದ ಸಂಕಟ ಹುಟ್ಟಿಸಲು,
ನಿನ್ನ ಸಂರಕ್ಷೆಯ ಪೂರ್ಣತೆ
ಯಿಂದ,
ಯೇಸುವೆ, ಪಾಲಿಸು ಶಾಂತಿ
ಯನು!
ಯೇಸುವೆ, ತ್ರಾಹಿ! ಸಹಾಯ
ಕನಾಗು!
ಮೋಕ್ಷದ ಮಾರ್ಗದಿ ನಾಯ
ಕನಾಗು!

೩. ಬಿಡದೆ ನಮಗೆ ಹತ್ತುವ
ಪಾಪ,
ಸಾವಿರ ವಿಧದ ಆಶೆಗಳು
ನಿತ್ಯದಲೆಬ್ಬಿಸಿ ದೇವರ ಶಾಪ,
ಅಧಿಕ ಸಂಕಟ ಪಡಿಸಲು,
ಯೇಸುವೆ, ತ್ರಾಹಿ! ದುರಾಶೆ
ಗಳನ್ನು
ನೊಂದಿಸಿ, ಮಾಡು ವಿಮೋಚ
ನೆಯನ್ನು!



## ೧೦೨.

Mel. O Durchbrecher aller Bande.
76. 1. 28. 34. 40. 85.

೧. ಎಂದಿಗೂ ಸಮೀಪವಾದ
ಸರ್ವಬಂಧ ಹರನೆ,
ನಿತ್ಯಸುಖಪೂರ್ತಿಯಾದ
ಬುಗ್ಗೆ ನೀನೆ ನಮಗೆ!
ತೀರಿಸಿನ್ನು ನ್ಯಾಯವನ್ನು
ನಮ್ಮ ಹಳೆ ಬುದ್ಧಿಗೆ!
ಬಿಡಿಸೆಮ್ಮ ಶೆರೆಯನ್ನು,
ಓ ಕಟಾಕ್ಷಪೂರನೆ!

೨. ತಂದೆ ಕೊಟ್ಟ ಮಂದೆಯಲ್ಲಿ
ಒಂದು ಕುರಿ ಸಾಯದು;
ಭಕ್ತರೆಲ್ಲ ರಾಜ್ಯದಲ್ಲಿ
ಶೇರಿ, ಹರ್ಷಗೊಂಬರು.
ಕಾರ್ಯ ತೀರಿಸೋದಕಾಗಿ
ಶುದ್ಧ ಪ್ರಾಯಶ್ಚಿತ್ತವ,
ನಮ್ಮ ಪಾಪಗಳಿಗಾಗಿ
ಯೇಸು ಸತ್ತು, ಮಾಡಿದ.

೩. ನಮ್ಮ ಆತ್ಮಸಿದ್ಧಿ ಗೈಯ್ಯ
ನಿನ್ನ ಚಿತ್ತ ಸ್ಥಿರವೆ;
ಸುಖನಿಧಿ ನಿನ್ನಲೈಯ್ಯ
ನೆಲೆಯಾಗಿ ಇರುತೆ.
ಕ್ರೂಜೆವರ್ತಮಾನಕಾಗಿ

ಲೋಕವೆಲ್ಲ ಬೈದರು,
ನೀನೆ ಮಿತ್ರನಿರಲಾಗಿ
ನಮಗೇನು ಚಿಂತೆಯು?

೪. ನೋಡು! ಬಂಧದಲ್ಲಿದ್ದೇವೆ;
ನಾವು ನೀಚ ದಾಸರು.
ಮೂಲ್ಗಿ, ಕೂಗಿ, ಬೇಡುತೇವೆ;
ನಮ್ಮ ನೊಗ ತಪ್ಪಿಸು!
ಈ ಪ್ರಪಂಚಸೇವೆಯನ್ನು
ಮಾಡೊದೆಷ್ಟೊ ಕಷ್ಟವು!
ನಿನ್ನ ಮುಕ್ತಿಕಾರ್ಯವನ್ನು
ನಮ್ಮಲನುಕೂಲಿಸು!

೫. ನಮ್ಮದುಷ್ಟ ವೈರಿಯನ್ನು
ನೀನು ಜೈಸು, ಕರ್ತನೆ!
ಕೊಡು ಹೊಸ ಬಲವನ್ನು
ಕುಂದಿ ಹೋದ ನಮಗೆ!
ಹೋಗಲ್ಯೆ ಮನುಷ್ಯಸ್ನೇಹ!
ಹೋಗು, ನರಭಯವೇ!
ಹೋಗಲ್ಯೆ ಮನೋಸಂದೇಹ!
ಹೋಗು, ಮಾಂಸಪ್ರೀತಿಯೇ!

೬. ಕರ್ತ, ಮುರಿ, ಜಜ್ಜು, ಕುಟ್ಟು
ಅಂಧಕಾರಶಕ್ತಿಯ!
ನಿನ್ನ ಪ್ರೀತಿಯಿಂದ ಸುಟ್ಟು
ಹಾಕು ನಮ್ಮ ಪಾಪವ!
ಸರ್ಪಬೀಜವಂ ಬಿಸಾಡು
ಅಗ್ನಿಕುಂಡದೊಳಗೆ!
ತಂದೆಮನೆ ಸಿದ್ಧ ಮಾಡು
ಭಕ್ತಸಮುದಾಯಕೆ!

೭. ನಮ್ಮಮಾಂಸಕುಪಚಾರ
ಇಹದಲ್ಲಿ ಬೇಡವು.
ನಿನ್ನ ಚಿತ್ತಕನುಸಾರ
ಮಾತ್ರ, ಕರ್ತ, ನಡಿಸು!
ನಿನ್ನ ಬಾಯ್ಯ ಸತ್ಯ ಮಾತು
ಪೂರ್ತಿಯಾಗೊ ವರೆಗೆ
ನಮ್ಮ ಆತ್ಮ ನಿನ್ನನಾತು
ಕೊಂಡು ದೃಢವಾಗಿದೆ.

೮. ರಾಜ, ನಿನ್ನ ರಾಜ್ಯವಾಳು!
ನಿನ್ನ ಪ್ರಜೆ ಸಲಹು!
ಸರ್ವಪ್ರಭುವಾಗಿ ಬಾಳು
ಘನವಾಗಿ ಎಂದಿಗು!
ಭಾರ ಹೊತ್ತು, ಒಂದು ದಾನ
ಬೇಡುತೇವೆ, ಯೇಸುವೆ!
ನಿಜಮುಕ್ತಿವಾಸಸ್ಥಾನ
ತೋರ ಮಾಡು ನಮಗೆ!

೯. ಕೊಂಡು ಕೊಂಡಿ ಭಕ್ತರನ್ನು

ನೀನಮೂಲ್ಯ ಕ್ರಯಕೆ;
ನಿನ್ನ ಕ್ರೂಜೆಫಲವನ್ನು
ಕೊಡು ನಿನ್ನ ಸಭೆಗೆ!
ನಿನ್ನ ರೂಪಕವರನ್ನು
ಸರಿಯಾಗಿ ರೂಪಿಸು!
ನಿನ್ನ ಆತ್ಮಪೂರ್ತಿಯನ್ನು
ಹೊಂದಿ, ತೃಪ್ತಿಯಹೆವು.

೧೦. ಪ್ರೀತಿ, ನಿನ್ನಸಭ್ಯರನ್ನು
ಕೃಪೆಯಿಂದ ಸಲಹಿ,
ಪರದೈಸ ಸುಖವನ್ನು
ಅಂತ್ಯದಲ್ಲಿ ಕೊಡುವಿ.
ನಾವು ಜಯಕೀರ್ತಿಯನ್ನು
ಹೊಂದಿ, ನಿನ್ನ ಐಕ್ಯದಿ
ಶೇರಿ, ಶುಭ ಸ್ವಪ್ನವನ್ನು
ಕಂಡ ಹಾಗೆ ಮಾಡುವಿ.



೧೦೩.

Mel. Eins ist Noth. 41.

೧. ಒಂದವಶ್ಯ! ಒಂದೆ ಅರ್ಥ
ನನಗೀಗ ತಿಳಿಸು!
ಬೇರೆ ಎಲ್ಲ ಆಶೆ ವ್ಯರ್ಥ;
ಬೇರೆ ಸುಖವಿರದು.
ಸಂಸಾರದ ಭೋಗದಿ ಆತ್ಮದ
ಶೋಕ;
ಸಂಪೂರ್ಣ ಸಂತೋಷವನೀ
ಯದು ಲೋಕ.
ಆ ಉತ್ತಮ ದಾನವು ಶಿಕ್ಕಿದರೆ,
ನಂಗೊಂದರಲೆಲ್ಲವು ಪ್ರಾಪ್ತಿ
ಸುತೆ.

೨. ಏಕ ಕಾಂಕ್ಷೆಯುಳ್ಳ ಪ್ರಾ
ಣ
ಲೌಕಿಕೆಲ್ಲ ತ್ಯಜಿಸಿ,
ಕ್ರಿಸ್ತನಲ್ಲಿ ಸ್ಥಿರ ಧ್ಯಾನ
ಇಟ್ಟು ಕೊಂಡು ಇರಲಿ!
ಈತೀತನು ದೇವಮನುಷ್ಯನ
ಮೂರ್ತಿ;
ಈತೀತನು ಸರ್ವ ಮಹತ್ವದ
ಪೂರ್ತಿ;
ಈತೀತ ಪರಾತ್ಪರ ಅರಸನು;
ಈತೀತನು ಗತಿ ನಿರಂತರಕು!

೩. ನಿನ್ನ ಮೇಲೆ ನನ್ನ ಆಶೆ,
ಅತಿಪ್ರಿಯ ಯೇಸುವೇ!
ನನ್ನ ನಿತ್ಯ ಅಭಿಲಾಷೆ
ನೀನೆ, ದಿವ್ಯ ಮಿತ್ರನೇ!
ಅನೇಕರು ತೊಲಗಿ ಹೋಗಲಿ! 
ಯೇಸು,
ನಿನ್ನಲ್ಲಿಯೆ ಉಳಿವದೆನಗೆ ಲೇ
ಸು!

ನಿನ್ನಮರ ವಾಕ್ಯದ ಬಂಡೆ
ಯೊಳು
ಸಜ್ಜೀವದ ಬುಗ್ಗೆಯು ಏರುವ
ದು.

**೪.** ಒಬ್ಬ ದಿವ್ಯ ಯಜಮಾನ
ನಮಗೇಸು ಕ್ರಿಸ್ತನು.
ಈತ ಹೇಳುತಿರ್ವ ಜ್ಞಾನ
ಶ್ರೇಷ್ಠ ಆತ್ಮತೃಪ್ತಿಯು.
ಈತೀತನು ಕ್ರೂಜೆಯ ಸೈರಿಸಿ
ದ್ದಾನೆ;
ಈತೀತ ಮನುಷ್ಯರಿಗೊಲೆ
ಯುತಾನೆ.
ಕ್ರಿಸ್ತೇಸುವ ಸ್ನೇಹವನರಿವುದೆ
ಸರ್ವೋತ್ತಮ ಒಡವೆ ಭಕ್ತರಿ
ಗೆ!



## ೧೦೪.

Mel. Ach bleib mit deiner Gnade. 149. 14. 23.

**೧.** ಓ ಕರ್ತ, ನಿನ್ನ ದಯ
ಇಟ್ಟೆಮ್ಮ ಹತ್ರವು
ನಿಂತಿರು! ಆಗ ಭಯ
ಬಿಟ್ಟೆದೆ ಗೊಂಬೆವು.

**೨.** ಓ ರಾಜ, ನಿನ್ನ ಮಾತು
ಕೊಟ್ಟೆಮ್ಮ ಸಲಹು!
ಅದಿರಲೆಮ್ಮ ಧಾತು
ಇಲ್ಲ್ಯಲ್ಲಿ ಕುಂದದು.

**೩.** ಓ ಸೂರ್ಯ, ನಿನ್ನ ಕಾಂ
ತಿ
ನಮ್ಮಲ್ಲಿ ಸುರಿಸು!
ಅದೆಸಲಾಗಿ ಭ್ರಾಂತಿ
ಏನೊಂದು ಹತ್ತದು.

**೪.** ಈಯ್ ನಿನ್ನ ಆಶೀರ್ವಾ
ದ,
ಓ ಧನಿ, ಸರ್ವಥಾ!
ಈಯ್ ಮಿಗುಮಿಗಿಲಾದ
ಐಶ್ವರ್ಯವರವಾ!

**೫.** ಓ ವೀರ, ನೀ ಸಹಾಯ
ಕೊಟ್ಟೆಮ್ಮ ಪಾಲಿಸು!
ಅರ್ಯಂಬುಗಳ ಘಾಯ,
ನೀನಿರೆ, ತಾಗದು.

**೬.** ಓ, ಕೊಟ್ಟ ಭಾಷೆಯನ್ನು
ನೀ ಮುಟ್ಟಿಸರಸೆ!
ವಿಶ್ವಾಸಶೀಲವನ್ನು
ಕೊಡೆಲ್ಲ ಕಾಲಕೆ!

೬. ಮೃತೀಲಿಯೂ ವಿಶ್ರಾಂತಿ
ತಾ ನಮಗೀಶನೇ!
ಓ ಪಾಪಿ, ಪಾಪಶಾಂತಿ
ಆಯ್ತು! ಎನ್ನು, ಯೇಸುವೇ!



## ೧೦೫.

C. M. O thou from whom all goodness flows. 129. 43. 114. 127.

೧. ಓ ಕೃಪಾಮೂಲ, ಕರ್ತನೆ,
ನೀನೆನ್ನ ಆಶೆಯು!
ಸಮಸ್ತ ಕಷ್ಟದೊಳಗೆ
ನನ್ನನ್ನು ನೆನಸು!

೨. ಅಘೋರ ಪಾಪಭಾರವ
ನಾ ತಾಳ ಕೂಡದು.
ನೀ ಮನ್ನಿಸೈ! ಸುಶಾಂತಿಯ
ಕೊಟ್ಟೆನ್ನ ನೆನಸು!

೩. ಜೀವಾತ್ಮಪ್ರಾಣ ಕುಂದುವ
ಸಂಕಷ್ಟ ಹುಟ್ಟಲು,
ದಿನಕ್ಕೆ ತಕ್ಕ ಶಕ್ತಿಯ
ಕೊಟ್ಟೆನ್ನ ನೆನಸು!

೪. ಈ ಬಲಹೀನ ದೇಹವ
ರೋಗಾದಿ ತಿನ್ನಲು,
ಸಹಾಯ, ಶಾಂತಿ, ತಾಳ್ಮೆಯ
ಕೊಟ್ಟೆನ್ನ ನೆನಸು!

೫. ನಾ ನಿನಗಾಗಿ ನಿಂದೆಯ
ತಾಳೋವನಾದರು,
ಅದೇನು? ನಿನ್ನ ದಾಸನ
ನೀ ಮಾತ್ರ ನೆನಸು!

೬. ಅಘೋರ ಮೃತ್ಯುಘಳಿಗೆ
ಕಡೇಲಿ ಬರಲು,
ನನ್ನನ್ನು ರಕ್ಷಿಸೇಸುವೆ!
ಓ, ನನ್ನ ನೆನಸು!



## ೧೦೬.

Mel. Ach Gott, gedenke mein. 135. 25.

೧. ಓ ದೇವ, ನೆನಸು!
ನಿನ್ನಾತು ಕೊಂಡಿದ್ದೇನೆ.
ಈ ಮೊರೆ ಇಡಲು,
ನಿರ್ಭಯ ಗೊಳ್ಳುತೇನೆ.
ಸಂಕಷ್ಟ ಬಂದರು,
ಅಧೈರ್ಯ ಪಡೆನು;

ಘಟ್ಟ್ಯಾಗಿ ಕೂಗುವೆ—
ಓ ದೇವ ನೆನಸು!

೨. ಓ ದೇವ, ನೆನಸು!
ಕೃಪಾಳು, ಪ್ರಿಯ ತಂದೆ,
ಕಾಪಾಡು! ನಿನ್ನನು
ಆಶ್ರೈಸಿ ಕೊಳ್ಳ ಬಂದೆ.
ಈಗೇನು ಕಡಿಮೆ?
ಸಂತೃಪ್ತನಾದೆನು;
ಇದೊಂದೆ ಭಾವನೆ—
ಓ ದೇವ, ನೆನಸು!

೩. ಓ ದೇವ, ನೆನಸು!
ಮಹಾಪರಾಧಿಯಾದೆ.
ನಿನ್ನಾಜ್ಞೆ, ತಂದೆಯೆ,
ನಾ ಮೀರಿ, ದೂರವಾದೆ.
ನಾ ಕೆಟ್ಟೆನಾದರು,
ಕ್ರಿಸ್ತೇಸು ಶುದ್ಧನು;
ನಂಗಾತ ರಕ್ಷಕ!
ಓ ದೇವ, ನೆನಸು!

೪. ಓ ದೇವ, ನೆನಸು!
ಸಂಪೂರ್ಣ ನ್ಯಾಯವನ್ನು
ಕ್ರಿಸ್ತೇಸು ತೀರಿಸಿ,
ಅಶುದ ಪಾಪಿಯನ್ನು
ವಿಮೋಚಿಸಿಹನು.
ನನ್ನಾಪ್ತ ಯೇಸುವು
ನಿನ್ನಾಪ್ತನಲ್ಲವೊ?
ಓ ದೇವ, ನೆನಸು!

೫. ಓ ದೇವ, ನೆನಸು!
ಆಪತ್ತು ಬರುವಾಗ
ನೀನೆನ್ನ ಬಿಡದೆ,
ಜೀವಾಂತ್ಯ ಮುಟ್ಟಿದಾಗ
ಕಟಾಕ್ಷ ತೋರಿಸಿ,
ನನ್ನಾತ್ಮ ಉಳುಹು!
ಕಡೇ ಸಂಕಷ್ಟದೊಳ್
ಓ ದೇವ, ನೆನಸು!

೬. ಓ ದೇವ, ನೆನಸು!
ನೀ ನಿಜ ನೆಪ್ಪುಗಾರ!
ಕ್ರೂಜೇಲಿ ಕಳ್ಳಗೆ
ನೀ ನುಡಿದಾ ಪ್ರಕಾರ
ಪರ್ದೈಸ ಶೇರಿದ
ವಿಮುಕ್ತ ಕಳ್ಳನು.
ನನ್ನನ್ನು ಹಾಗೆಯೆ,
ಓ ದೇವ, ನೆನಸು!

೭. ಓ ದೇವ, ನೆನಸು!
ನಿನ್ನಾತು ಕೊಂಡಿದ್ದೇನೆ.
ಈ ಮೊರೆ ಇಡಲು,
ನಿರ್ಭಯ ಗೊಳ್ಳುತೇನೆ.

ಸಂಕಷ್ಟ ಬಂದರು,
ಅಧೈರ್ಯ ಪಡೆನು;
ಘಟ್ಟ್ಯಾಗಿ ಕೂಗುವೆ—
ಓ ದೇವ, ನೆನಸು!



ಗ೦೭.

Mel. Herzlich lieb hab ich dich, o Herr. 100.

೧. ಓ ಪ್ರಿಯನಾದ ಕರ್ತನೆ!
ನನ್ನಿಂದ ದೂರವಾಗದೆ,
ಬಾ, ಬಾ, ಸಹಾಯಕಾಗಿ!
ನಾನಿಹಪರದಲ್ಲಿಯು
ಏನೊಂದು ಚಿಂತೆ ಮಾಡೆನು,
ನೀ ದಯ ಮಾಡಲಾಗಿ.
ಹೃದ್ಗೃಹ ಭಿನ್ನವಾದರು,
ನಿನ್ನಲ್ಲಿ ಸುಖಿಯಹೆನು.
ನೀ ನಿನ್ನ ಶುದ್ಧ ರಕ್ತದಿ
ಸಂರಕ್ಷೆ ನಿರ್ಮಿಸಿರುತಿ.
ಓ ಯೇಸುವೆ,
ಓ ದೇವರಾದ ಕ್ರಿಸ್ತನೆ,
ಸಂರಕ್ಷೆ ಕೊಡು ನನಗೆ!

೨. ಈ ಕೀಳ ಜೀವದೊಳಗೆ
ನಂಗಿರ್ಪದೆಲ್ಲ ನಿನ್ನದೆ;
ದೇಹಾತ್ಮ ನಿನ್ನ ದಾನ.
ಯಾವಾಗ್ಯು ನಾನು ನಿನ್ನವ!
ನೀ ಕೊಡು ಪ್ರೀತಿಯಾಜ್ಞೆಯ,
ಓ ನನ್ನ ಯಜಮಾನ!
ದುರ್ಬೋಧನಾತಿಮೋಸವ,
ಸೈತಾನ ದುಷ್ಟ ಯುಕ್ತಿಯ
ಹೀನೈಸಿ ಕ್ರೂಜೆಬೋಧನೆ
ನೀನುಪದೇಶಿಸೆನಗೆ!
ನಾ ಸಾಯಲೆ,
ಆಧಾರವನ್ನು, ಕ್ರಿಸ್ತನೆ,
ನೀ ಕೊಡು ನನ್ನ ಆತ್ಮಕೆ.

೩. ಈ ಜೀವ ತೀರಿದಾಗಲು,
ನ್ಯಾಯಾಜ್ಞೆದಿನ ವರೆಗು
ಈ ದೇಹ ನಿದ್ದೆ ಗೈಯ್ಯ್ಯ
ಆಜ್ಞಾಪಿಸೊಳ್ಳೆ ಸ್ಥಳಕೆ
ನನ್ನಾತ್ಮವನ್ನು ಬೇಗನೆ
ಇಲ್ಲಿಂದ ಕೊಂಡು ವೈಯ್ಯ್ಯ
ಆಜ್ಞಾಪಿಸೆನ್ನ ಕರ್ತನೆ!
ಕಣ್ಣಾರೆ ನಿನ್ನ ಮಹಿಮೆ
ನಾನಲ್ಲಿ ನೋಡುತಿರ್ಪೆನು.
ಈ ದೇಹ ಶೀಘ್ರ ಎಬ್ಬಿಸು!
ನಾನೆದ್ದರೆ,
ಓ ಪ್ರಿಯ ಕರ್ತ, ನಿನಗೆ
ಅನಂತ್ಯ ಸ್ತೋತ್ರ ಮಾಡುವೆ.



## ೧೦೮.

Mel. Mit tausend Gaben. 125.

೧. ಕರುಣವುಳ್ಳ,
ಮಹಿಮೆಯುಳ್ಳ
ದೇವರೆ, ನನ್ನ
ಬಿನ್ನಹವನ್ನ
ಲಾಲಿಸು! ಪ್ರಿಯ ತಂದೆಯೆ,
ಕೊಡು ಆತ್ಮವ ಮಗನಿಗೆ!

೨. ಬೇಡುವ ನನ್ನ
ಹೃದಯವನ್ನ
ಸಂತಸದಲ್ಲಿ
ಯೇಸುವಿನಲ್ಲಿ
ಶೇರಿಸು ಬೇಗ! ತಂದೆಯೆ,
ಕೊಡು ಆತ್ಮವ ಮಗನಿಗೆ!

೩. ಆತನು ಬಳ್ಳಿ.
ಕುಡಿಗಳಲ್ಲಿ
ಕ್ರಿಸ್ತನ ಸಾರ
ಏಳಲು, ಭಾರ
ಫಲವು ನಿಜ್ಜ ಬಾರದೆ?
ಕೊಡು ಆತ್ಮವ ಮಗನಿಗೆ!

೪. ಕ್ರಿಸ್ತನ ಭಕ್ತಿ,
ಕ್ರಿಸ್ತನ ಶಕ್ತಿ
ಫಲಗಳಲ್ಲಿ
ಮೆರೆಯುವಲ್ಲಿ
ನಿನಗೆ ಸ್ತೋತ್ರ, ತಂದೆಯೆ!
ಕೊಡು ಆತ್ಮವ ಮಗನಿಗೆ!

---

## ೧೦೯.

Mel. O du Liebe meiner Liebe.
1. 28. 34. 40. 76. 85.

೧. ಕರುಣಾಕಟಾಕ್ಷವುಳ್ಳ
ತಂದೆ, ಮಗ, ಆತ್ಮವೆ!
ಕೃಪೆಯನ್ನು, ಪ್ರೀತಿಯುಳ್ಳ
ಕರ್ತ, ತೋರಿಸೆಮಗೆ!
ನಮ್ಮ ಪಾಪಮೋಹದಲ್ಲಿ
ನಿನ್ನ ವಾಕ್ಯ ಮರೆತು,
ಈ ಪ್ರಪಂಚಕಾಡಿನಲ್ಲಿ
ದಾರಿ ತಪ್ಪಿ ಸತ್ತೆವು.

೨. ನಾವು ನಿನಗೆಷ್ಟೊ ದ್ವೇಷ
ಮಾಡಿ, ಕೆಟ್ಟು ಹೋದೆವು!
ದುಷ್ಟ ತಂತ್ರವುಳ್ಳ ಶೇಷ
ಎಷ್ಟೊ ಮೋಸ ಮಾಡಿತು!
ಈಗ ನಿನ್ನ ಪ್ರೀತಿ ನೋಡಿ,
ವ್ಯರ್ಥ ಬುದ್ಧಿ ಕಳೆದು,
ನಿನ್ನ ಕಾಲ ಹತ್ರ ಓಡಿ,
ನಿನ್ನ ವಶವಾದೆವು.

---

## ೧೧೦.

2 Cor. 13, 13. Mel. 162.

೧. ಕರ್ತನಾದ ಯೇಸು ಕ್ರಿ
ಸ್ತನ ಕೃಪೆಯೂ
ದೇವರ ಪ್ರೀತಿಯೂ
ಪರಿಶುದ್ಧಾತ್ಮದ ಐಕ್ಯವೂ
ಸದಾ ನಮ್ಮೆಲ್ಲರೊಂದಿಗಿರಲಿ!
ಆಮೆನ್!



## ೧೧೧.

Mel. Ach Gott, verlass mich nicht. 135. 25.

೧. ಕೈ ಹಿಡಿ ದೇವರೇ!
ಓ ಬಿಡ ಬೇಡ, ಐಯ್ಯ!
ನನ್ನನ್ನು ಕಡೆಗೆ
ಸೌಭಾಗ್ಯ ಪಡಿಸೈಯ್ಯ!
ಅನಾದಿಭಾಸ್ಕರ!
ಅನಂತಪ್ರೀತಿಯೇ!
ಕೃಪಾಳು ಒಡೆಯ!
ಕೈ ಹಿಡಿ, ದೇವರೇ!

೨. ಕೈ ಹಿಡಿ, ದೇವರೇ!
ವಿಶ್ವಾಸದೃಢವನ್ನು
ನನ್ನಲ್ಲಿ ಹುಟ್ಟಿಸು!
ಭಯಸ್ಥ ಭಕ್ತನನ್ನು
ಸಂತೋಷ ಪಡಿಸು!
ಸಮಸ್ತ ಪಾಪಕೆ
ನೀ ತಪ್ಪಿಸೆನ್ನನು!
ಕೈ ಹಿಡಿ, ದೇವರೇ!

೩. ಕೈ ಹಿಡಿ, ದೇವರೇ!
ಹೃದಂತರಂಗದಿಂದ
ಬಿನ್ನೈಸಿ, ಸುಯ್ಯುತೇನ್.
ಕಟಾಕ್ಷಪೂರ್ತಿಯಿಂದ
ಸಹಾಯ ಕಳುಹು!
ಸಂಕಷ್ಟಶೋಧನೆ
ನನ್ನಲ್ಲಿ ಬೀಳಲು,
ಕೈ ಹಿಡಿ, ದೇವರೇ!

೪. ಕೈ ಹಿಡಿ, ದೇವರೇ!
ಅಧೀನ ಪುತ್ರನನ್ನು,
ಓ ತಂದೆ, ಪಾಲಿಸು!
ನಾ ಗೈಯ್ವ ಕೃತ್ಯವನ್ನು
ಚನ್ನಾಗಿ ಸಾಗಿಸು!
ಓ ದಯಾಪಿತನೇ,
ನಂಗೊಲ್ದು, ಸಲಹು!
ಕೈ ಹಿಡಿ, ದೇವರೇ!

೫. ಕೈ ಹಿಡಿ, ದೇವರೇ!
ಸದ್ಭಕ್ತಶೀಲವನ್ನು
ನನ್ನಲ್ಲಿ ನಿರ್ಮಿಸಿ,
ಅನಂತ್ಯ ಮುಕ್ತಿಯನ್ನು

ಈಯ್ ನಿನ್ನ ಮಗಗೆ!
ನಿನ್ನನ್ನು ನಂಬುವೆ
ನಿರಂತಕಾಲಕೆ.
ಕೈ ಹಿಡಿ, ದೇವರೇ!



## ೧೧೨.

Mel. Russian Tune.
(Borniansky.) 28. 1. 34. 40. 76. 85.

೧. ಕೊಡು, ಕೊಡು ಜೀವ ಪಾನ,
ಕೊಡು ಜೀವರೊಟ್ಟಿಯ!
ಕೊಡು, ಕೊಡು ಆತ್ಮಸ್ನಾನ!
ಕೊಡು ನೀತಿವಸ್ತ್ರವ!
ಕೊಡು ಕ್ರೂಜಿವೃಕ್ಷಫಲ
ವಿಷ ತಿಂದ ಪಾಪಿಗೆ!
ಕೊಡು ಒಂದು ವಾಸಸ್ಥಲ
ಶಾಂತಿಹೀನ ಆತ್ಮಕೆ!

೨. ತ್ರಾಹಿ, ತ್ರಾಹಿ, ದಿವ್ಯ ಮಿತ್ರ!
ತ್ರಾಹಿ! ನಾನು ಬೀಳುವೆ.
ತ್ರಾಹಿ, ತ್ರಾಹಿ, ಓ ಪವಿತ್ರ!
ತ್ರಾಹಿ! ನಾನು ಮಡಿದೆ.
ತ್ರಾಹಿ! ನಿನ್ನ ಶ್ರಮದಿಂದ
ಶಾಂತಿ ನಮಗಾಯಿತು.
ತ್ರಾಹಿ! ನಿನ್ನ ಮೃತಿಯಿಂದ
ಹುಟ್ಟಿತೆಮ್ಮ ಜೀವವು.

೩. ಜಯ, ಜಯ, ಪ್ರಿಯ ಶೂರ!
ಜಯ, ದೇವಪುತ್ರನೇ!
ಜಯ, ಜಯ, ನೀತಿಸೂರ!
ಜಯ, ನಿತ್ಯ ತೇಜವೇ!
ಜಯ, ಪರಲೋಕದಿಂದ
ಬಂದ ದಿವ್ಯ ರಕ್ಷಕ!
ಜಯ, ನರಲೋಕದಿಂದ
ಮೇಲಕೇರಿದರಸ!



## ೧೧೩.

Mel. O du Liebe meiner Liebe.
1. 28. 34. 40. 76. 85.

೧. ನನ್ನ ಮೇಲೆ ದಯವಿಡು,
ನನ್ನ ಪ್ರಿಯ ಯೇಸುವೇ!
ನನ್ನ ಪಾಪ ಸುಟ್ಟು ಬಿಡು,
ಪರಿಶುದ್ಧ ಕರ್ತನೇ!
ಕಿತ್ತು ಪಾಪಬೀಜವನ್ನು
ನನ್ನಲಿಂದ, ಕ್ರಿಸ್ತನೆ!
ನಿನ್ನ ಕೃಪಾಕಾಂತಿಯನ್ನು
ಮೂಡ ಮಾಡು ನನಗೆ!

೨. ನನ್ನ ಬಡ ಮೊರೆಯನ್ನು

ಕೇಳು, ಪ್ರಿಯ ಕರ್ತನೆ!
ಕಾಡಿನಿಂದ ಭಕ್ತನನ್ನು
ನಿನ್ನ ಸನ್ನಿಧಾನಕೆ
ತರುವಾಗ ನಿನ್ನ ಮುಖ
ನಿತ್ಯ ನೋಡುತಿರುವೆ;
ನಿನ್ನ ಹತ್ರ ಪೂರ್ಣ ಸುಖ,
ನಿನ್ನ ಹತ್ರ, ಕ್ರಿಸ್ತನೆ!



## ೧೧೪.

Mel. Old Hundredth Psalm.
131. 24. 44. 45. 130. 132.

೧. ನಮ್ಮನ್ನು ನೋಡು, ಕರ್ತನೆ!
ನಿನ್ನಾತ್ಮ ಕೊಡು ನಮಗೆ!
ಸನ್ಮಾರ್ಗದಲ್ಲಿ ನಮ್ಮನು
ಕಟಾಕ್ಷದಿಂದ ನಡಿಸು!

೨. ನಿನ್ನನ್ನು ಸ್ತುತಿಸೋದಕೆ
ನೀ ಸಡ್ಲಿಸೆಮ್ಮ ನಾಲಿಗೆ!
ಸಂತೋಷವುಳ್ಳ ಸೇವೆಗೆ
ನಮ್ಮನ್ನು ಎಬ್ಬಿಸಾಳ್ಮನೆ!

೩. ಸದ್ವಾಕ್ಯವೆಂಬ ಬೀಜವು
ನಮ್ಮೆದೆಯಲ್ಲಿ ಮೊಳಿತು,
ನಿನ್ನಾತ್ಮದಿಂದ ವರ್ಧಿಸಿ,
ಅಮೂಲ್ಯ ಪೈರು ಕೊಡಲಿ!

೪. ಓ ಪಿತ, ಪುತ್ರ, ಆತ್ಮವೇ!
ತ್ರಿಯೇಕನಾದ ದೇವರೇ!
ಕಟಾಕ್ಷಪೂರ್ಣ ನಿನ್ನನು
ನಾವೆಂದು ಸ್ತುತಿಸೋಣವು!



## ೧೧೫.

Mel. Die wir uns
allhier beisammen finden. 124.

೧. ನಿನ್ನ ಮುಂದೆ ಒಡಂಬಡುತೇವೆ,
ಕ್ರೂಜೆ ತಾಳ್ದ ಕರ್ತನೆ,
ನಿನ್ನಲೈಕ್ಯವಾಗಿ, ನಿತ್ಯ ಸೇವೆ
ನಡಿಸೋಣ ನಿನಗೆ!
ನಮ್ಮ ಬಡ ಸ್ತೋತ್ರಬಲಿಗಾಗಿ
ನೀನು ಮೆಚ್ಚಿ ಕೊಂಡ ಗುರುತಾಗಿ,
ನಮಗಾಮೆನ್! ಎನ್ನಲು,
ಸಮಾಧಾನ ಪಾಲಿಸು!



## ೧೧೬.

Mel. Sieh, hier bin ich,
Ehrenkönig. 6. 10.

೧. ಬಡ ಪಾಪಿ ನಾನು ಬಂದೆ
ನಿನ್ನ ಮುಂದೆ, ದೇವರೆ!

ನೀನೆ ನೀತಿಯುಳ್ಳ ತಂದೆ;
ಕೊಡು ಶಾಂತಿಯೆನಗೆ!
ಕೇಳು ನನ್ನ
ಮೊರೆಯನ್ನ!
ಭಯಭ್ರಾಂತಿ ಕಾಡುತೆ.

೨. ತ್ರಾಣ ಕುಂದಿ, ನನ್ನ ಭಾರ
ಇನ್ನು ಮೇಲೆ ತಡೆಯೆ.
ಕೊಡು ಪಾಪಪರಿಹಾರ,
ಕೊಡು, ಪ್ರಿಯ ಯೇಸುವೆ!
ಕೇಳು ನನ್ನ
ಮೊರೆಯನ್ನ!
ಪಾಪ ಹತ್ತಿತೆನಗೆ.

೩. ದೇವರಾತ್ಮ, ಅಂಧರಲ್ಲಿ
ದಿವ್ಯ ಕಾಂತಿ ಹೊತ್ತಿಸು!
ನನ್ನ ಅಂತರ್ಭಾವದಲ್ಲಿ
ಶೇರಿ, ವಾಸಿಸೆಂದಿಗು!
ಕೇಳು ನನ್ನ
ಮೊರೆಯನ್ನ!
ನಾನು ಶುದ್ಧಿಹೀನನು.



## ೧೧೨.

Mel. Mitten wir im Leben sind. 53. 46.

೧. ಮಧ್ಯ ಜೀವದೊಳಗೆ
ಮೃತಿಯಲ್ಲಿದ್ಧೇವೆ.
ಎಲ್ಲಿ ಗತಿ? ಕೃಪೆಯ
ಎಲ್ಲಿ ಹೊಂದುತೇವೆ?
ನಿನ್ನೊಬ್ಬನಲ್ಲೆ ಕರ್ತ!
ಓ ಕರ್ತ, ನಮ್ಮ ಕರ್ಮವು
ನಿನ್ನ ಕೋಪವೇರ್ಸಿತು!
ನಿರ್ಮಲ ಕರ್ತನೇ,
ನಿರ್ಮಲ ಶಕ್ತನೇ,
ನಿರ್ಮಲ ದಯಾಪರನಾದ
ಸಂರಕ್ಷಕನೇ,
ತೀಕ್ಷ್ಣ ಸಾವಿನಿಂದ
ನಮ್ಮ ಆತ್ಮ ತಪ್ಪಿಸು,
ಕಟಾಕ್ಷ ಪಟ್ಟು!

೨. ಮಧ್ಯ ಮೃತಿಯೊಳಗೆ
ನರಕಾಗ್ನಿದ್ವಾರ
ತೆರೆದಾಗಲೆಮಗೆ
ಎಲ್ಲಿ ಪ್ರೀತಿಗಾರ?
ನೀನೊಬ್ಬ, ನಮ್ಮ ಕರ್ತ!
ನೀನೆಮ್ಮ ಕೇಡು ದೃಷ್ಟಿಸಿ,
ರಕ್ಷಿಸನುಗ್ರಹದಿ!
ನಿರ್ಮಲ ಕರ್ತನೇ,
ನಿರ್ಮಲ ಶಕ್ತನೇ,
ನಿರ್ಮಲ ದಯಾಪರನಾದ
ಸಂರಕ್ಷಕನೇ,
ಅಗ್ನಿಭಯದಲ್ಲಿ

ದೊಬ್ಬ ಬೇಡ ನಮ್ಮನು,
ಕಟಾಕ್ಷ ಪಟ್ಟು!

೩. ಮಧ್ಯ ನರಕಾಗ್ನಿಯ
ಶಿಕ್ಷಾಪರಿಮಾಣ
ನೋಡಿ, ಭೀತಿ ಗೊಳ್ಳಲು,
ನಮಗೆಲ್ಲಿ ಸ್ಥಾನ?
ನಿನ್ನೊಬ್ಬನಲ್ಲೆ, ಯೇಸು!
ನೀ ನಿನ್ನ ರಕ್ತ ಚೆಲ್ಲಿದೆ
ಪಾಪಪರಿಹಾರಕೆ.
ನಿರ್ಮಲ ಕರ್ತನೇ,
ನಿರ್ಮಲ ಶಕ್ತನೇ,
ನಿರ್ಮಲ ದಯಾಪರನಾದ
ಸಂರಕ್ಷಕನೇ,
ಹೀನ ಮಾಡ ಬೇಡ
ಭಕ್ತರ ಪ್ರತೀಕ್ಷೆಯಂ,
ಕಟಾಕ್ಷ ಪಟ್ಟು!

---

## ೧೧೮.

Mel. O Durchbrecher aller Bande.
76. 1. 28. 34. 40. 85.

೧. ಮೃತ್ಯುವಿಟ್ಟ ಬಂಧವನ್ನು
ಬಿಡಿಸಿದ ಮನುಜ!
ಶತ್ರು ತಂದ ಸೇನೆಯನ್ನು
ಓಡಿಸಿದ ನಾಯಕ!
ತ್ರಾಣದಿಂದ ಲೋಕವಾಳು,
ಕ್ರೂಜೆ ತಾಳಿದವನೇ!
ಜಯಪ್ರದನಾಗಿ ಬಾಳು,
ಓ ಮಹತ್ವದರಸೇ!

೨. ಜಯಶಾಲಿಕ್ರಿಸ್ತ, ನನ್ನ
ಶೇರಿಸಿಕ್ಕು ದಂಡಿಗೆ!
ಡಾಲು ಖಡುಗಂಗಳನ್ನು
ಇಡು ನನ್ನ ಹಸ್ತಕೆ!
ಧೀರ ಯುದ್ಧಧ್ವನಿ ಎತ್ತಿ,
ಹತ್ತಿ ನಿನ್ನ ಹೆಜ್ಜೆಗೆ,
ಶತ್ರುಜನನಡುನೆತ್ತಿ
ಭಂಗ ಮಾಡಿ, ಜೈಸುವೆ.

೩. ಸುಖಕ್ಷೇಮವಾಗಿ ಸಾ
ಯ್ವೆ,
ತಂದೆಗಾತ್ಮವೊಪ್ಪಿಸಿ;
ಮೃತ್ಯುದ್ವಾರವನ್ನು ಹಾಯ್ವೆ
ಕ್ರಿಸ್ತನಾಮಜಯದಿ.
ಈ ಶರೀರವನ್ನು ಕೀಟ
ತಿಂದರೇನು ಚಿಂತೆಯು?
ನಿತ್ಯ ಮಹಿಮೇ ಕಿರೀಟ
ಹೊಂದಿ, ಹರ್ಷ ಗೊಂಬೆನು.



# VII. ಸ್ತೋತ್ರದ ಗೀತಗಳು.

### ೧೧೯.

Mel. Nun danket alle Gott. 25. 135.

೧. ಎಲ್ಲಾನ್ನು ಭೋಗಿಸಿ
ದಯಾಳು ಕರ್ತನಿಂದ
ಕೃತಜ್ಞರಾಗಿರಿ
ಮನೋವಾಕ್ಕಾಯದಿಂದ!
ನಮ್ಮನ್ನು ರಕ್ಷಿಸಿ
ತಾಯ್ಗರ್ಭದಿಂದಲೇ,
ಸಹಸ್ರ ವರವ
ಕೊಟ್ಟವನಾತನೇ!

೨. ಉದಾರಿ ದೇವರೆ,
ಸುಶಾಂತ ಹೃದವನ್ನು
ಸುಕ್ಷೇಮದೊಂದಿಗೆ
ಕೊಟ್ಟೆಲ್ಲ ಭಕ್ತರನ್ನು
ಕಾಪಾಡಿ ರಕ್ಷಿಸೋ!
ಕಡೇಲಿ ನಮಗು
ಆ ಲೋಕದೊಳಗೆ
ವಿಮುಕ್ತಿ ಮೂಡಿಸು!

೩. ಪಿತಾಪುತ್ರಾತ್ಮಕೆ,
ಮಹೋಚ್ಚ ಪೀಠದಲ್ಲಿ
ಕೂತಿರುವಾತಗೆ
ಸಮಸ್ತ ಸೃಷ್ಟಿಯಲ್ಲಿ
ಅನಂತ್ಯ ಸ್ತೋತ್ರವು!
ಹೌದೆಮ್ಮ ಸ್ತುತಿಯೂ
ತ್ರೈಲೋಕ್ಯ ಕರ್ತಗೆ
ಇಂಪೇಳಲೆಂದಿಗೂ!



### ೧೨೦.

Mel. Alle Menschen müssen sterben. 56 b. 38. 39. 64.

೧. ಹ್ಯಾಗೆ, ಓ ಇಮ್ಮಾನುವೇಲೆ,
ನಿನ್ನ ಸ್ತೋತ್ರ ಹಾಡಲಿ!
ಅನುದಿನ ಕೃಪೆ ಮೇಲೆ,
ಕೃಪೆಯನ್ನು ಕೊಡುತಿ!
ನೀ ಸಹಾಯಕಾಗಿ ಬಂದಿ;
ನೀನು ಅನ್ನಪಾನ ತಂದಿ
ಸಾಯುವಂಥ ಪಾಪಿಗೆ.
ನನ್ನ ಪ್ರಿಯ ಮಿತ್ರನೆ!

೨. ದೂರ ಹೋದೆ; ದೂರದಿಂದ
ನೀನು ನನ್ನ ಕರೆದೆ.
ನರಕಾಗ್ನಿಹಾದಿಯಿಂದ

ನನ್ನನೆಳ್ದಿ, ಯೇಸುವೆ!
ಈಗ ಸುಖ ಪಡುತ್ತೇನೆ;
ನಿನ್ನ ದಾಸನಾಗಿದ್ದೇನೆ;
ನಿನ್ನ ಪಾದ ಹಿಡಿದು
ಮುಕ್ತನಾಗಿರುವೆನು.

ಲೋಕಕಾಡಿನಲ್ಲಿ ಸುಖ
ನನಗೇನು ಶಿಕ್ಕಿತು?
ಒಳ್ಳೆ ಕುರುಬನ ಮುಖ
ನೋಡಿ ಸುಖ ಪಟ್ಟೆನು.
ನೀನೆ ಸರ್ವಯಜಮಾನ;
ತೃಪ್ತಿ, ಕ್ಷೇಮ, ಸಮಾಧಾನ
ಕೊಡ ನೀನೆ ಶಕ್ತನು;
ನಿತ್ಯ ದ್ರವ್ಯ ನಿನ್ನದು.

೪. ನೀನು ಧೈರ್ಯ ಕೊಡ ಲಾಗಿ,
ಚಿಂತೆ ನನಗಿಲ್ಲವು;
ಕ್ರಿಸ್ತ, ನಿನ್ನ ಭಕ್ತನಾಗಿ
ಸುಖದಿಂದಲಿರ್ವೆನು.
ಸರ್ವಲೋಕಘನವೆಲ್ಲ,
ಅಧಿಕಾರಶಕ್ತಿಯೆಲ್ಲ
ನಿನ್ನದೆಲ್ಲವಾಳುತಿ;
ನನ್ನ ನೀನೆ ಕಾಯುವಿ!

———

೧೨೧.

Mel. Herr, dir ist Niemand zu vergleichen. 78.

೧. ಓ ಮನವೇ, ಯೆಹೋವನನ್ನು
ಕೊಂಡಾಡಿ, ದಿವ್ಯ ನಾಮವನ್ನು
ವಿನಯವಾಗಿ ಸ್ತುತಿಸು!
ಸರ್ವೇಶನತಿಕೃಪೆಯನ್ನು,
ಸಮಸ್ತ ಉಪಕಾರವನ್ನು
ನೀ ಧ್ಯಾನ ಮಾಡು ನಿತ್ಯಕು!
ಯೆಹೋವ ಪಾಪರೋಗವನ್ನು
ಸಂಪೂರ್ಣ ಸ್ವಸ್ಥ ಮಾಡಿದ;
ಯೆಹೋವನಾತ್ಮಶಾಂತಿಯನ್ನು
ಕೊಟ್ಟೋಡಿಸೋನು ಭಯವ.

೨. ಯೆಹೋವ ದಿವ್ಯ ಕೃಪೆಯಿಂದ,
ಆಶ್ಚರ್ಯವಾದ ಸ್ನೇಹದಿಂದ
ಸಂತೃಪ್ತಿ ಮಾಡ ಬಲ್ಲನು.
ಉತ್ಥಾನದೊಳ್ ಸಮಾಧಿಯಿಂದ
ನಾವೆದ್ದು, ದೇವಹಸ್ತದಿಂದ
ಕಿರೀಟ ಪಡಕೊಂಬೆವು.

ಯೆಹೋವ ಬಡ ಜನರಿಂಗೆ
ಸಂದೃಢವಾದ ಕೋಟೆಯು.
ಸದಾತ್ಮ ದೇವಮಕ್ಕಳಿಂಗೆ
ಆನಂದಭುಕ್ತಿಮೂಲವು.

೩. ನಮ್ಮಲ್ಲಿ ಬಿದ್ದ ಶಾಪವನ್ನು,
ನಮ್ಮಾತ್ಮದೇಹವ್ಯಥೆಯನ್ನು
ಯೆಹೋವನೆಲ್ಲ ತಿಳಿದು,
ನಮ್ಮಪರಾಧ ತೆಗೆಧಾಕಿ,
ನಮ್ಮನ್ನು ಮಕ್ಕಳೆಂತ ಸಾಕಿ,
ಸ್ವೀಕಾರ ಮಾಡಿ ಕೊಂಡನು.
ಓ ಪ್ರಿಯ ಆತ್ಮ, ಸ್ತೋತ್ರ ಮಾಡು
ಭೂಪರಲೋಕ ರಾಜಗೆ!
ಕಟಾಕ್ಷನಿಧಿ ಕೊಂಡು ಆಡು,
ವಿಮುಕ್ತವಾದ ಮನವೆ!

---

೧೨೨.

Mel. Womit soll ich dich wohl loben. 64. 38. 39. 56 b.

೧. ಕರ್ತ, ಯಾವ ರೀತಿಯಿಂದ
ನಿನ್ನ ಸ್ತುತಿ ಮಾಡುವೆ?
ತ್ರಾಣವನ್ನು ಮೇಲಿನಿಂದ
ಕೊಡು, ನನ್ನ ಕರ್ತನೆ!
ನಿನ್ನ ಪ್ರೀತಿ ಅತಿಶಯ!
ಅತಿರಿಕ್ತ ನಿನ್ನ ದಯ!
ಲಕ್ಷ ಸ್ತೋತ್ರ ನಿನಗೆ
ಆಗಲೆನ್ನ ದೇವರೆ!

೨. ನಿನ್ನ ಸತ್ಯ, ಪ್ರೀತಿ, ತ್ರಾಣ,
ದೃಢ ಅನುಗ್ರಹವು
ನನ್ನ ಹೃದಯೇಕ ಧ್ಯಾನ
ನಿತ್ಯ ಹಗಲಿರುಳು!
ಗತಿಯೇನು? ನಿನ್ನ ಪಾದ!
ಮುಕ್ತಿ? ನಿನ್ನ ಆಶೀರ್ವಾದ!
ಲಕ್ಷ ಸ್ತೋತ್ರ ನಿನಗೆ
ಆಗಲೆನ್ನ ದೇವರೆ!

೩. ಜಾರಿ ನಿನ್ನ ಮಾರ್ಗದಿಂದ
ಪಾಪ ಹೆಚ್ಚು ಮಾಡಿದೆ;
ನಿನ್ನ ದೀರ್ಘ ಶಾಂತಿಯಿಂದ
ಲಜ್ಜೆಯಾಯಿತೆನಗೆ.
ಕನಿಕರವುಳ್ಳ ತಂದೆ,
ಪರಿಹಾರ ಕೇಳ ಬಂದೆ.
ಲಕ್ಷ ಸ್ತೋತ್ರ ನಿನಗೆ
ಆಗಲೆನ್ನ ದೇವರೆ!

೪. ಪೂರ್ಣ ಅನುಗ್ರಹದಿಂದ
ನೀನು ನನ್ನ ನಡಿಸಿ,
ನಾನು ಹುಟ್ಟಿದಂದಿನಿಂದ

ದಯ ಮಾತ್ರ ಮಾಡಿದಿ.
ನಿನ್ನ ಪ್ರೀತಿಮೇರೆ ಏನು?
ಹಂಗು ಹ್ಯಾಗೆ ಸಲ್ಲಿಸ್ಯೇನು?
ಲಕ್ಷ ಸ್ತೋತ್ರ ನಿನಗೆ
ಆಗಲೆನ್ನ ದೇವರೆ!

೫. ನನ್ನ ಭಕ್ತಿಯಂ ಪರೀಕ್ಷೆ
ಮಾಡ ನೀನು ಯೋಚಿಸಿ,
ಈಗ ಪ್ರೀತಿ ಆಗ ಶಿಕ್ಷೆ
ನನಗಾಗ ಮಾಡಿದಿ.
ಆದೆನೀಗ ನಿನ್ನ ದಾಸ;
ನಿನ್ನ ಚಿತ್ತ ನನ್ನಭ್ಯಾಸ.
ಲಕ್ಷ ಸ್ತೋತ್ರ ನಿನಗೆ
ಆಗಲೆನ್ನ ದೇವರೆ!

೬. ಪ್ರಿಯ ತಂದೆ, ಪೂರ್ಣ ಪ್ರೀತಿ
ನೀನು ಮಾಡಿದೆನಗೆ.
ನಿನ್ನ ದಯವುಳ್ಳ ರೀತಿ,
ಯೇಸು, ರುಚಿ ನೋಡಿದೆ.
ಆತ್ಮ, ನಿನ್ನ ಶುದ್ಧ ಕಾಂತಿ
ನನಗೆಂದಿಗೂ ವಿಶ್ರಾಂತಿ.
ಲಕ್ಷ ಸ್ತೋತ್ರ ನಿನಗೆ,
ಓ ತ್ರಿಯೇಕ ದೇವರೆ!

---

೧೨೩.

Mel. Sollt ich meinem Gott nicht singen. 152.

೧. ನನ್ನ ದೇವರೊಲ್ಮೆಯನ್ನು
ನೋಡಿ, ಹಾಡದಿರಲೋ?
ಕೃಪೆಯಿಂದ ಸಭ್ಯರನ್ನು
ಆಳುತಾನೆ, ಅಲ್ಲವೋ?
ದೇವಹೃತ್ತು ಮೇರೆಯನ್ನು
ಮರ್ತು ಪ್ರೀತಿ ಮಾಳ್ಪುದು;
ಸಾಕಿ ಕಾಯ್ಯ ಮಾಣನು
ದಾಸರಾದ ಭಕ್ತರನ್ನು.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೨. ಹದ್ದು ಮರಿಮ್ಮೈಯ ಮೇಲೆ
ರೆಕ್ಕೆ ಹೊದಿಯುತ್ತದೆ;
ಹಾಗೆಯೆನ್ನ ವೇಳೆ ವೇಳೆ
ದೇವಹಸ್ತ ಮುಚ್ಚುತೆ.
ಆತ ತಾಯ್ಯ ಗರ್ಭದಲ್ಲಿ
ನನ್ನನುಂಟು ಮಾಡಿದ;
ಇಂದಿಗೆನಗಿರುವ
ಜೀವವಿಹುದಾತನಲ್ಲಿ.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೩. ನನ್ನಲಿಟ್ಟ ಪ್ರೀತಿಯಿಂದ
ಪುತ್ರನನ್ನು ಕೊಟ್ಟನು;
ದೇವಪುತ್ರರಕ್ತದಿಂದ
ನರಕಾಗ್ನಿ ಆರಿತು.
ದೇವಪ್ರೀತಿಮಿತಿ ಇಲ್ಲ,
ಇಲ್ಲವೆನ್ನು, ಮನವೆ!
ನಿನ್ನ ಅಲ್ಪ ಬುದ್ಧಿಗೆ
ನೆಲವೆಂದು ಕಾಣ್ಬುದಿಲ್ಲ.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೪. ವಾಗ್ಮುಖಾಂತ್ರ ತಂದೆ
ಯಿಂದ
ಬಂದ ಶುದ್ಧ ಆತ್ಮವು
ಪರಕೆನಗಿಹದಿಂದ
ಹಾದಿ ತೋರಿಸೀಯ್ವನು.
ಈತ ನನ್ನ ಮನಸನ್ನು
ತನಿ ಬೆಳಕಾಗಿಸಿ,
ವೃತಿ ಜೈಸಿ, ಘನದಿ
ಗೆಲ್ಲುತಾನೆ ನರ್ಕವನ್ನು.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೫. ಕಾಯುತಾನೆ ಭದ್ರವಾಗಿ
ನನ್ನ ಆತ್ಮಸುಖವ;
ಮೈಗವಶ್ಯವಿರಲಾಗಿ,
ಬಪ್ಪುದನ್ನವಸನ.
ಲೋಕದಲ್ಲಿ ಬುದ್ಧ್ಯುಪಾಯ
ಕಾಣದಿರೆ, ಹೆದರೆ;
ಬಲಹೀನ ದಾಸಗೆ
ಈಯ್ವನೀಶನೇ ಸಹಾಯ!
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೬. ಭೂಮ್ಯಾಕಾಶಬಲಸೇನೆ
ನನ್ನ ಸೇವೆಗಿಟ್ಟನು.
ನೆರೆ ತೃಪ್ತನಾಗುತೇನೆ;
ಕಂಡದೆಲ್ಲ ನನ್ನದು.
ಗುಡ್ಡ, ಹಳ್ಳ, ಕಡಲ್, ರೇವು,
ಪೃಥ್ವಿ, ಅಂತರಿಕ್ಷವು
ನನ್ನದೆಲ್ಲಿ ಎಲ್ಲಿಯು
ದೇವರಿತ್ತನೆಂಗೆ ಮೇವು.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೭. ಎಂದು ಚಿಂತೆ ಪಡಲಾರೆ.
ಕಷ್ಟ ತೀರೆ ಮಲಗಿ,
ಭದ್ರವಾಗಿ ಹೊತ್ತು ಆರೆ
ಏಳುತೇನೆ ಸುಖದಿ.
ದೇವರನುಗ್ರಹದಿಂದ
ನನ್ನ ಕಾಯದಿದ್ದರೆ,
ಆಗದಿತ್ತು ರಕ್ಷಣೆ

ನಾನಾ ಉಪದ್ರಂಗಳಿಂದ.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೮. ತಂದೆ ನಿಜ ಮಗನನ್ನು
ತಳ್ಳಿ ಬಿಡಲೊಲ್ಲನು;
ಕೊಲ್ಲನಾಪ್ತ ಶಿಶುವನ್ನು
ಅಶ್ರುಧಾರೆಯಿಡಲು.
ಕ್ರೂರ ಕತ್ತಿಯಿಂದ ಅಲ್ಲ
ಬೆತ್ತದಿಂದ ಹೊಡೆದು,
ದಯಾಪೂರ್ಣ ದೇವರು
ನನ್ನ ಗುಣ ಮಾಡ ಬಲ್ಲ.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೯. ನಾನು ಪೆಟ್ಟು ತಿನ್ನುವಾ
ಗ,
ಕಣ್ಣ ನೀರು ಬಪ್ಪುದು;
ಮತ್ತೆ ಬುದ್ಧಿ ಹುಟ್ಟಿದಾಗ,
ನಂಬಿ, ಧೈರ್ಯವಾಹೆನು.
ಲೋಕ ನನ್ನ ಹೃತ್ತು ಕದ್ದು
ಕೊಳ್ಳಧಾಗೆ ಶಿಕ್ಷೆಯೆ
ಬೇಕು ಹೆಡ್ಡ ಮಗಗೆ;
ಕ್ರೂಜೆಯೆಂಗೆ ಒಳ್ಳೆ ಮದ್ದು.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೧೦. ದುಃಖ ಪಟ್ಟರೂ, ಅಭ
ಯ
ಕೊಡೊ ವಾಕ್ಯ ಇರುತೆ;
ಕ್ರೂಜೆ ತೀರಿದಾಗ, ದಯ
ಹೊಂದಿ, ತೃಪ್ತನಾಗುವೆ.
ಶಿಕ್ಷೆಮಳೆ ಬೀಳುವಾಗ,
ಪ್ರೀತಿಸೂರ್ಯ ಕಾಣದೆ
ಹೋಗಿ, ಕಾಂತಿ ಕೊಡುತೆ
ಪಾಪಮೇಘ ಹರಿದಾಗ.
ಎಲ್ಲಕೂ ಸ್ವಕಾಲವು;
ದೇವಪ್ರೀತಿ ತೀರದು.

೧೧. ನಿನ್ನ ಪ್ರೀತಿಗಂತವಿಲ್ಲ;
ನಾನು ಹ್ಯಾಗು ಹೆದರೆ.
ನೀನು ತಳ್ಳಿ ಬಿಡೊದಿಲ್ಲ
ಮಗನನ್ನು, ತಂದೆಯೆ!
ಜೀವವೆನಗಿರುವಲ್ಲಿ
ದಯೆಯಿಂದ ನನ್ನನು
ಘಟ್ಟಿ ನೆಲೆ ಗೊಳ್ಳಿಸು
ನಿನ್ನ ದಿವ್ಯ ಪ್ರೀತಿಯಲ್ಲಿ!
ಇಹ ಕಳೆಯುತ್ತಲೆ,
ಪ್ರೀತಿಯೈಕ್ಯಕ್ಕೋಗುವೆ.

---

### ೧೨೪.

Mel. Nun lob', mein' Seel', den Herren. 116.

೧. ನನ್ನಾತ್ಮ, ಕರ್ತನನ್ನು
ಆಸಕ್ತಿಯಿಂದ ಸ್ತುತಿಸು!
ಕೃಪಾತಿಶಯವನ್ನು
ನೀ ಮರ್ಯದಿರು ಎಂದಿಗು!
ನಿನ್ನೀಶ ನಿನ್ನ ಪಾಪ
ತಾನ್ ಹೊತ್ತು ದೇಹದೊಳ್,
ಸಮಸ್ತ ನಿನ್ನ ಶಾಪ
ತಾನ್ ತಾಳ್ದ ಕ್ರೂಜೆಯೊಳ್.
ಓ ಭಕ್ತ, ನಿಂದೆಯನ್ನು
ತಾಳ್! ಇನ್ನು ಯೇಸುವು
ಸ್ವರಾಜ್ಯಮಾನವನ್ನು
ಸುಭಕ್ತಗೀಯ್ವನು.

೨. ಪವಿತ್ರ ನ್ಯಾಯವನ್ನು
ಯೆಹೋವ ನಮಗಿತ್ತನು;
ಆದಾಗ್ಯು ಕೃಪೆಯನ್ನು
ಕೊಡೋನು ಶಾಂತಿಯರಸು.
ಶಿಟ್ಟನ್ನು ಬೇಗ ಬಿಟ್ಟು,
ವಿನಾಶ ಮಾಡದೆ,
ಯಾವಾಗ್ಯು ದಯೆ ಇಟ್ಟು
ದೀನಾತ್ಮಜನಕೆ,
ಭಕ್ತರ್ಗೆ ಒಲಿಯೋನು;
ಪೂರ್ವಕ್ಕೆ ಪಶ್ಚಿಮ
ಎಷ್ಟಷ್ಟು ಹಾರಿಸೋನು
ನಮ್ಮಪರಾಧವ.

೩. ಸುಪಿತೃ ಮಕ್ಕಳಿಂಗೆ
ಎಂಬಂತೆ ಕರ್ತದೇವರು
ಸ್ವಕೀಯ ಭಕ್ತರಿಂಗೆ
ಕಟಾಕ್ಷ ಮಾಡುತಿಹನು.
ನಮ್ಮನ್ನು ಆತ ಬಲ್ಲ;
ಮಣ್ಣೆಮ್ಮ ಒಡಲು,
ನಾಂ ಘಟ್ಟಿಯವರಲ್ಲ,
ಹೂವಂತೆ ಇಹೆವು;
ಹೊತ್ತೇರಿ ಕಾಯಲಾಗಿ
ಅದಿಲ್ಲಧೋಗೊದು;
ಬರೋದು ಶೀಘ್ರವಾಗಿ
ಮನುಷ್ಯನಂತ್ಯವು.

೪. ದಿವ್ಯಾನುಗ್ರಹವೊಂದೆ
ಯಾವಾಗ್ಯು ಸ್ಥಿರವಾದದು;
ಸದ್ಭಕ್ತರಿಂಗಿದೊಂದೆ
ಪ್ರತೀಕ್ಷಾಬಲದುರ್ಗವು.
ಯೆಹೋವನಾಳುತಾನೆ
ಭೂಪರಲೋಕದಿ;
ನಮ್ಮಪ್ಪನಾಗಿದ್ಧಾನೆ.
ಇಂಪಾಗಿ ಹೊಗ್ಳಿರಿ
ಈ ದೊಡ್ಡ ನಾಮವನ್ನು
ಬಲಿಷ್ಠ ದೂತರೇ!

ನೀನೂ ಯೆಹೋವನನ್ನು
ಕೊಂಡಾಡೆನ್ನಾತ್ಮವೇ!

೧೨೫.

S. M. Awake and sing the song. 128. 126.

೧. ನಾಂ ಮೋಶೆಗೀತವ
ಹಾಡೋಣ, ಭ್ರಾತ್ರರೇ!
ಪವಿತ್ರ ಕುರಿಮರಿಯ
ಕೊಂಡಾಡು, ಸಭೆಯೇ!

೨. ಸತ್ತೋದ ಪ್ರೀತಿಯು,
ಉತ್ಥಾನಘನವು,
ಪ್ರಧಾನಯಾಜಕತ್ವವು,
ಇವನ್ನು ಸ್ತುತಿಸು!

೩. ಚೀಯೋನ ಪಟ್ಣಕೆ
ಪ್ರಯಾಣ ಮಾಡಲು,
ಒಂದೇ ಸಂತೋಷ ಭಕ್ತಗೆ
ಆ ಕುರಿಮರಿಯು.

೪. ಕ್ರಿಸ್ತೇಸು ಬೇಗನೆ
ನಮ್ಮನ್ನು ಕರೆದು,
ಸ್ವದೇಶಮುಕ್ತಿಸ್ಥಾನಕೆ
ಪ್ರೀತ್ಯಾಗಿ ಒಯ್ವನು.

೫. ನೀನಲ್ಲಿ ಕೊಡುವ
ಸಂತೋಷ ತೀರದು;
ಹಾಡೋದು ಹೊಸ ಗೀತವ
ವಿಮುಕ್ತ ಗಣವು.

೧೨೬.

Mel. God save the Queen. 32.

೧. ಬಾಳಲಿ ದೇವಜ!
ಆಳಲಿ ಮಾನವ
ಗೋತ್ರವನು!
ನೀತಿಯ ರಾಜನೇ,
ಪ್ರೀತಿಯ ಗುರುವೇ,
ಗೀತದ ಗುರಿಯೇ,
ಕರುಣಿಸು!

೨. ಮಾನದ ಉನ್ನತ
ಸ್ಥಾನದಿಂದಿಳಿದ
ಅರಸನೆ!
ಅಮಿತ ದಯದಿ
ತಂದೆಯನಗಲಿ,
ರಕ್ತವ ಚಲ್ಲಿದಿ
ರಕ್ಷಣೆಗೆ.

೩. ನೀತಿಯ ದೇವರೇ,
ಪ್ರೀತಿಯ ಮೂಲವೇ,
ಸಂರಕ್ಷಕ!

ತಾಪವ ಸೈರಿಸಿ,
ಶಾಪವ ತಾಳಿದಿ.
ಎಂದಿಗು ಪಡುವಿ
ಸಂಸ್ತುತಿಯ!



೧೨೭.

Mel. Praise God from whom all blessings flow. 163.

೧. ಸಮಸ್ತ ಜೀವರಾಶಿಯೇ,
ಸಮಸ್ತ ದೂತಸೈನ್ಯವೇ,
ಪಿತಾಪುತ್ರಾತ್ಮಕೆರಗಿ,
ಅನಂತ ಸ್ತೋತ್ರ ಮಾಡಿರಿ!



೧೨೮.

Mel. Gelobt sei Gott im höchsten Thron. 119.

೧. ಸಂಪೂರ್ಣ ಪ್ರಾಯಶ್ಚಿತ್ತ
ವ
ಕೊಟ್ಟಂಥ ಈಶಪುತ್ರನ
ಕೊಂಡಾಡೊದೆಂಥ ಸಂತಸ!
ಹಲ್ಲೆಲೂಯಾ!

೨. ತೃತೀಯ ದಿನ ಬೆಳಿಗ್ಯೆ
ಉತ್ಥಾನವಾದ ಕರ್ತಗೆ
ತ್ರಿಲೋಕ ವಶವಾದದೆ!
ಹಲ್ಲೆಲೂಯಾ!

೩. ಅಪಾರ ಸಾಲ ತೆತ್ತನು;
ಕ್ರೂಜೇಲಿ ಸೋತು ಗೆದ್ದನು;
ಸಮಾಧಿಯಿಂದ ಎದ್ದನು.
ಹಲ್ಲೆಲೂಯಾ!



೧೨೯.

Mel. Allein Gott in der Höh' sey Ehr. 15. 102. 105.

೧. ಸರ್ವೋನ್ನತಂಗೆ ಸ್ತೋ
ತ್ರವು!
ಆತಂಗೆ ಸ್ಥಿರ ಸೇವೆ
ಮಾಡೋಣ! ನಾವು ನಿತ್ಯಕು
ಸುಭದ್ರ ಬಾಳುತೇವೆ.
ನಮ್ಮಲ್ಲಿ ದೇವರೊಲ್ಮೆಯೂ
ಅನಂತ್ಯ ಸಮಾಧಾನವೂ;
ವಿರುದ್ಧ ತೀರಿತೆಲ್ಲ.

೨. ಓ ಸರ್ವಸೃಷ್ಟಿರಾಜ
ನೇ,
ಆಶ್ಚರ್ಯ ನಿನ್ನ ನೀತಿ!
ಓ ನಮ್ಮ ಪ್ರಿಯ ತಂದೆಯೇ,
ಅತ್ಯಂತ ನಿನ್ನ ಪ್ರೀತಿ!
ಅಶೋಧ್ಯ ನಿನ್ನ ಜ್ಞಾನವು;
ಸಂಪೂರ್ಣ ನಿನ್ನ ಶಕ್ತಿಯು!
ಓ ಒಳ್ಳೆ ಯಜಮಾನ!

೩. ಓ ದೇವಪುತ್ರ ಯೇಸುವೆ,
ಓ ತಂದೆಪ್ರತಿಕಾಂತಿ!
ಪಾಪಾಬ್ಧಿಮಗ್ನ ಜನಕೆ
ನಿನ್ನಿಂದ ಬಂತು ಶಾಂತಿ.
ನೋಡೆಮ್ಮ ದುಃಖಸ್ಥಿತಿಯಂ!
ತಾರೈಯ್ಯ ಹೃದಸುಖವಂ,
ನಮ್ಮಲ್ಲಿ ದಯವಿಟ್ಟು!

೪. ದೇವಾತ್ಮ, ಪರಿಶುದ್ಧನೆ!
ಸೈತಾನಬಲ ಮುರಿ!
ವಿಮುಕ್ತವಾದ ಸಭೆಗೆ
ಕೊಡೀಶಭಕ್ತಿಯುರಿ!
ಓ ಬಿಡಿಸೆಲ್ಲ ಕಷ್ಟವಂ!
ಕೊಡೈ ವಿಶ್ರಾಂತಿಗತಿಯಂ!
ನಮ್ಮಲ್ಲಿ ವಾಸ ಮಾಡು!

---

೧೩೦.

Mel. Lobe den Herren, den mächtigen König der Ehren. 3.

೧. ಸ್ತೋತ್ರವನುತ್ತಮ ದೇ
ವರಿಗರ್ಪಿಸ ಬನ್ನಿ,
ಊರ್ಧ್ವಾದಿ ಕರ್ತಗೆ ಮಹಿಮೆ
ಯಾಗಲಿ ಅನ್ನಿ!
ಹರುಷದಿ
ದೂತರ ಸಂಘದಲಿ
ಸ್ತೋತ್ರಸುಗಂಧವ ತನ್ನಿ!

೨. ಭೂದಿವಲೋಕಗಳಾತನ
ಸ್ವಾಶ್ರಿತ ರಾಜ್ಯ.
ಯಾವನು ಭೂದಿವರಾಜನ
ಸಂಗಡ ವ್ಯಾಜ್ಯ
ಮಾಡುವನು?
ಆತನು ನುಡಿಯಲು,
ಮರ್ತ್ಯರ ಗದ್ದಲ ತ್ಯಾಜ್ಯ!

೩. ಕ್ರಿಸ್ತನು ಕ್ರಯಕೆ ಕೊಂ
ಡ ಜನಾಂಗವಿದ್ದೇವೆ.
ರಾಜನ ಚಿತ್ತಕೆ ಒಪ್ಪಲಿ ದಾಸ
ರ ಸೇವೆ!
ಒಡೆಯನು
ನಮಗೆ ಒಲಿಯಲು,
ಸುಖದಿ ಜೀವಿಸುತೇವೆ.

# VIII. ಆದರಣೆಯ ಗೀತಗಳು.

## ೧೩೧.

Mel. Gott lebt! wie kann ich traurig sein. 156. 99.

೧ ಇದ್ಧಾನೆ ದೇವರ್! ಆತ ನು
ನನ್ನಾಪತ್ತೆಲ್ಲ ಬಲ್ಲ.
ದುಃಖಾಬ್ಧಿಯಲ್ಲಿ ಜೀಳಲು,
ಯಾನ್ ಭ್ರಷ್ಟಾನಾಥನಲ್ಲ.
ನಾನತ್ತರೆ
ಕಂಡಿರನೆ?
ಆತಂಗೆ ಹೇಳೆ, ದಯ
ಇಡೋನು. ಯಾಕೆ ಭಯ?

೨. ಕೇಳಿರುತಾನೆ ದೇವರು!
ಯಾನ್ ಮೊರೆ ಇಡಲಾಗಿ,
ಆಲೈಸುತಾನೆ ಒಲೆದು,
ನನ್ ಕಡೆ ಕಿವಿ ಬಾಗಿ.
ವಿಜ್ಞಾಪನೆ
ಮೇಲೇರಲೆ,
ಕಟಾಕ್ಷದಿಂದ ರಾಯ
ನಂಗೀಯುವನ್ ಸಹಾಯ.

೩. ಕಂಡಿರುತಾನೆ ದೇವರು!
ಇರ್ಳಾತಗಿರುಳ್ಳ.
ಅಗಾಧ ಚಿಂತೆ ಬರಲು,
ಗೋಳಾಡ ತಕ್ಕದಲ್ಲ.
ಕಣ್ಣೊಳಗೆ
ನೀರೇರಲೆ,
ಕಂಡದನೊರಸೋನು;
ಸಂತೋಷವನ್ನಿಡೋನು.

೪. ಮುಂಥೋಗುತಾನೆ ದೇವರು!
ನಿಶ್ಚಿಂತನಾಗಿದ್ಧೇನೆ.
ಉರ್ಲೊಡ್ಡಲೀ ಪ್ರಪಂಚವು!
ನಾ ದಾಟಿ ಹೋಗುತೇನೆ.
ಹಾದಿಕ್ಕಟ್ಟೀ!
ಎಂತಳಲೇ,
ಹೃದ್ಧೈರ್ಯ ಹುಟ್ಟಿಸೋನು;
ಕಾಲ್ ಜಾರೆ, ಕೈ ಕೊಡೋನು.

೫. ತಂದೀಯುತಾನೆ ದೇವರು!
ಸರ್ವೇಶನುಪಕಾರಿ.
ಓ ಪ್ರಾಣ ಹಶಿದಿರಲು,
ಬೇಡ್ಯ್ಯಣ್ಣು! ಸಾಯಲಾರಿ.
ಅರಣ್ಯಕೂ

ನಿನ್ನೊಯ್ದರೂ,
ದಿನಂಪ್ರತೀಲ್ಯಾಹಾರ
ನಿಂಗೀಯದಿರಲಾರ.

೬. ಒಲ್ದಿರುತಾನೆ ದೇವರು!
ಕಣ್ಣುರಿಗಂಜಲೇಕೆ?
ಎದೇಲಿ ನಿತ್ಯ ಪ್ರೀತಿಯು!
ಬೇಡ್! ಅಳುಮೋರೆಯೇಕೆ?
ಕ್ರೂಜೇಲಿಯೂ
ತೂಗಿದ್ದರೂ,
ಕ್ರಿಸ್ತೇಸು ಅಳಲಿಲ್ಲ.
ನಿಂಗ್ ವಿಘ್ನವೇನು ಇಲ್ಲ!

೭. ಇದ್ಧಾನೆ ದೇವರ್! ಆತ
ನು
ಕಣ್ಕೈವಿಯುಳ್ಳ ತಂದೆ;
ಮುಂಧೋಗುತಾನೆ, ನಿತ್ಯವು
ನಾ ಸ್ವಸ್ಥನಾಗಿ ಬಂದೆ;
ತಂದೀಯುವ
ಸತ್ಪ್ರೀತಿಯ
ಎಂದೆಂದು ತೋರಿಸೋನು,
ಎಂದೆಂದಿಗೊಲೆಯೋನು.



೧೩೨.

Mel. Befiehl du deine Wege.
30. 4. 155.

೧. ಈ ವ್ಯರ್ಥ ಚಿಂತೆ ಬಿಟ್ಟು,
ವಿಶ್ವಾಸವೆಂದಿಗು
ಸರ್ವೇಶನಲ್ಲಿ ಇಟ್ಟು,
ನೀನಂಜ ಬೇಡವು!
ಸಮಸ್ತ ಲೋಕವನ್ನು
ಆಳಿಪ್ಪ ದೇವರು
ವಿಧೇಯ ಭಕ್ತನನ್ನು
ಸಂರಕ್ಷೆ ಮಾಡೊನು.

೨. ಓ ಪಾಪಿ, ದೇವರಲ್ಲಿ
ವಿಶ್ವಾಸವಿರಿಸು!
ಜಗತ್ತು ಆತನಲ್ಲಿ
ಸಂತೃಪ್ತವಹುದು.
ಸಹಸ್ರ ಚಿಂತೆಯಿಂದ
ನಿಂಗೇನು ಲಾಭವು?
ವಿಶ್ವಾಸ ಮಾತ್ರದಿಂದ
ಸಮಸ್ತ ನಿನ್ನದು!

೩. ಓ ತಂದೆ, ನೀತಿಯನ್ನು
ನಮ್ಮಲ್ಲಿ ಬೆಳಿಸು!
ಅಸಪ್ಯ ಮಲವನ್ನು
ಪೂರಾಗಿ ತೊಳದು,
ಕೊಡೈ ವಿಶ್ರಾಂತಿಯನ್ನು

ಭಯಾತ್ಮ ಭಕ್ತಗೆ,
ಸದ್ವಾಕ್ಯಪ್ರೇಮವನ್ನು
ವಿರುದ್ಧ ಮನಕೆ!

**೪.** ನಿನ್ನಲ್ಲಿ ಶುದ್ಧ ನೀತಿ;
ನಿನ್ನಲ್ಲಿ ಬೆಳಕು;
ನಿನ್ನಲ್ಲಿ ಸತ್ಯ ಪ್ರೀತಿ;
ನಿನ್ನಲ್ಲಿ ತ್ರಾಣವು.
ಶತ್ರುಂಗಳೆಲ್ಲರನ್ನು
ವಿನಾಶ ಮಾಡುವಿ.
ಅನಂತ್ಯ ಸುಖವನ್ನು
ವಿಶ್ವಾಸಿಗೀಯುತಿ.

---

## ೧೩೩.

Mel. Was Gott thut, das ist wohlgethan. 99. 156.

**೧.** ಎಂದೂ ಸುಚಿತ್ತವಾಗಿದೆ
ದಯಾಳುದೇವಚಿತ್ತ.
ಸಂತೋಷವಾಗಿ ಬಾಳುವೆ,
ಕ್ರಿಸ್ತೇಸು, ನಿನ್ ನಿಮಿತ್ತ!
ಆ ಲೋಕದಿ
ಪ್ರವೇಶಿಸಿ,
ಮರ್ತೆಲ್ಲ ಕಷ್ಟ, ಬೇನೆ,
ವಿಮುಕ್ತನಾಗುತೇನೆ.

**೨.** ಎಂದೂ ಸುದಾನವಾಗಿದೆ
ದಯಾಳುದೇವದಾನ.
ಈ ಪಾಪವೆಂಬ ರೋಗಕೆ
ಅಸಹ್ಯರುಚಿಪಾನ
ಬೇಕಾದರೆ,
ನಾ ಕುಡಿಪೆ.
ಸುಕ್ಷೇಮ ಕೊಡ ಶಕ್ತ
ಮದ್ದೇಸುಕ್ರಿಸ್ತರಕ್ತ.

**೩.** ಎಂದೂ ಸುಶಿಕ್ಷೆಯಾಗಿದೆ
ದಯಾಳುದೇವಶಿಕ್ಷೆ.
ನಮ್ಮಾತ್ಮಗುಣಸ್ಥಿತಿಗೆ
ಉಂಟಾಗಲ್ಕೆ ಪರೀಕ್ಷೆ!
ಓ ತಂದೆಯೆ!
ನೀ ದಂಡಣೆ
ಕೊಟ್ಟಾಗ್ಯು, ತಾಳುತೇನೆ;
ಕೃತಜ್ಞನಾಗಿದ್ದೇನೆ.

**೪.** ಸನ್ಮಾರ್ಗದಲ್ಲಿ ಭಕ್ತನು
ಸಂಚರಿಸುತ್ತಿದ್ದಾನೆ;
ಆದೀಲಿ ಕತ್ತಲಿದ್ದರು,
ಕಡೇಲಿ ನೋಡುತಾನೆ
ಪ್ರಕಾಶವ.
ಓ ಹೃದಯ,
ಸಂದೇಹವೆಲ್ಲ ಬಿಡು!
ಸದಾ ವಿಶ್ವಾಸವಿಡು!

---

## ೧೩೪.

Mel. So führst du doch recht selig, Herr, die Deinen. 84.

೧. ಓ ಕರ್ತ, ಅಪರೂಪ ಮಾರ್ಗದಿಂದ
ಸ್ವಜನರಂ ಪರೀಕ್ಷೆ ಮಾಡುತಿ!
ಹ್ಯಾಗಾದರೂ ಸಂಪೂರ್ಣ ಪ್ರೀತಿಯಿಂದ
ಸ್ವಪ್ರಜೆಯನ್ನು ಕಾಯುತಿರುವಿ.
ನಿನ್ನಲ್ಲಿ ನಂಬುವಂಥ ದಾಸಗೆ
ಡೊಂಕಾದ ಮಾರ್ಗ ನೆಟ್ಟಗಹುದು;
ಆರಂಭದಲ್ಲಿ ಕತ್ತಲಿದ್ದರು,
ಕಡೇಲಿ ಎಲ್ಲ ಬೆಳಕಾಗುತೆ.

೨. ಮನುಷ್ಯಬುದ್ಧಿಕಲ್ಪಿತಂಗಳನ್ನು
ಅನೇಕ ಸಾರಿ ಹೀನ ಮಾಡುವಿ;
ನಮ್ಮಿಂದಲಾಗದಂಥ ಕೃತ್ಯವನ್ನು
ನೀನೊಂದು ಕ್ಷಣದಲ್ಲಿ ತೀರ್ಚುತಿ.
ಮಣ್ಣಾದ ನೀಚರನ್ನು ಎಬ್ಬಿಸಿ,
ಭೂರಾಜರಲ್ಲಿ ಕೂಡ್ರ ಮಾಡಲು,
ಗರ್ವಿಷ್ಠನನ್ನು ಬೇಗ ಹಿಡಿದು,
ಸ್ವಪೀಠದಿಂದ ತಳ್ಳಿ ಬಿಡುತಿ.

೩. ಓ ತಂದೆ, ನಿನ್ನ ಪ್ರೀತಿಚಿತ್ತದಿಂದ
ನನ್ನನ್ನು ಮಗುವೆಂತ ನಡಿಸೋ!
ಓ ಆತ್ಮವೇ, ಸುಶಾಂತ ಕಾಂತಿಯಿಂದ
ನನ್ನಲ್ಲಿ ನಿತ್ಯ ವಾಸವಾಗಿರೋ!
ಓ ನನಗಾಗಿ ಸತ್ತ ಯೇಸುವೇ!
ನಿನ್ನಿಂದ ಅಪಜಯವಾದೆನು;
ಅನಂತ ಪ್ರೀತಿ ನನ್ನ ಜೈಸಿತು.
ಇನ್ನೆಂದು ನಾನು ನಿನ್ನ ದಾಸನೇ!

---

## ೧೩೫.

Mel. Warum sollt ich mich denn grämen. 18. 37. 86.

೧. ಚಿಂತೆ ಯಾಕೆ? ಯಾಕೆ ದುಃಖ?
ಯೇಸುವು
ಬಂದನು;
ಆತ ನಮ್ಮ ಸುಖ.

ಆತಗುಂಟು ಘನಪೀಠ;
ನಮಗೆ
ಇಟ್ಟದೆ
ಮಹಿಮೇ ಕಿರೀಟ!

೨. ಹುಟ್ಟುವಾಗ ಏನು ತಂದೆ?
ಕೂಸಿಗೆ
ಏನದೆ?
ಬತ್ತಲಾಗಿ ಬಂದೆ!
ತೀರಿ ಹೋಗುವಾಗಲೇನು
ಹಿಡಿದು
ಹೊರಟು,
ಆಚೆ ದಾಟಿಯೇನು?

೩. ನಮ್ಮ ಜೀವ ನಮ್ಮದಲ್ಲ;
ದೇವರು
ಕೊಟ್ಟದು
ತೆಗೆಯಲ್ಕು ಬಲ್ಲ.
ಆತನಾಜ್ಞೆ ನಮ್ಮ ಅನ್ನ!
ಆತನು
ಮಾಡಿದ್ದು
ಎಂದಿಗೂ ಪ್ರಸನ್ನ!

೪. ಸ್ವಪ್ನದಂತೆ ಹೊನ್ನು, ಹಣ;
ಬೊಬ್ಬುಳಿ
ಕಾಣಿಸಿ
ಸಿಲ್ಲದೊಂದು ಕ್ಷಣ.
ಮಾಯೆ ನರಲೋಕದಲ್ಲಿ
ಇರುತೆ;
ಸತ್ಯವೆ
ಪರಲೋಕದಲ್ಲಿ!

೫. ಬೈದರೇನು ದ್ವೇಷಕಾರ?
ಮೋಕ್ಷವು
ನನ್ನದು;
ಮೋಕ್ಷ ತಪ್ಪಿಸಾರ.
ಆಸ್ತಿ, ಜೀವ, ವ್ಯರ್ಥ ಮಾನ
ಹೋದರು,
ಹೋಗದು
ನಿತ್ಯ ಸಮಾಧಾನ.

---

## ೧೩೬.

Mel. Wer nur den lieben Gott lässt walten. 120. 26. 146.

೧. ನಂಬತಿಪ್ರಿಯ ದೇವರಲ್ಲಿ,
ಆತಂಗೆ ಎಲ್ಲ ಒಪ್ಪಿಸು!
ನಿನ್ನನ್ನು ಎಲ್ಲ ಕಷ್ಟದಲ್ಲಿ
ಆಶ್ಚರ್ಯವಾಗಿ ಕಾಯ್ವನು.
ಈ ಬಂಡೆಯಲ್ಲಿ ಮನೆಯು
ಕಟ್ಟಿದ್ದರೆಂದು ಬೀಳದು.

೨. ಅಘೋರ ಚಿಂತೆಯಿಂದ ಏನು,
ಓ ದುಃಖಭ್ರಾಂತ ಮನವೆ?
ನಾವನುದಿನ ಅತ್ತರೇನು?
ಈ ಶೋಕವೆಲ್ಲ ಯಾತಕೆ?
ಈ ರೀತಿ ಕಷ್ಟಭಾರವು
ಮತ್ತಷ್ಟು ಹೆಚ್ಚು ಅಹುದು.

೩. ನಿನ್ನಾತ್ಮವೆಂದು ದೇವರನ್ನು
ನೋಡುತ್ತ ಶಾಂತವಾಗಲಿ!
ನೀ ನೋಡಿ ಆತನೊಲ್ಮೆಯನ್ನು,
ಕೃತಾರ್ಥನಾಗಿ, ಬಾಳುವಿ.
ಸ್ವೀಕಾರ ಗೈದ ತಂದೆಯು
ನಿನ್ನಾರ್ತಿಯೆಲ್ಲ ಬಲ್ಲನು.

೪. ಸಹಾಯ ಮಾಡುವದಕಾಗಿ
ಸುಕಾಲವಾತ ಬಲ್ಲನು;
ನಾವಾತನಲ್ಲಿ ದೃಢವಾಗಿ
ನಂಬೋಣ ಮಾತ್ರ ನೇಮವು.
ಕೃಪಾಳು ದೇವ ಫಕ್ಕನೆ
ಬರೋನು ಪ್ರಾಣರಕ್ಷೆಗೆ.

೫. ಸಂಕಷ್ಟದಗ್ನಿಯುರಿಯಲ್ಲಿ
ದೇವ್ರೆನ್ನ ಬಿಟ್ಟನೆಂಬದೂ
ಸೌಭಾಗ್ಯಕಾಲಮಾತ್ರದಲ್ಲಿ
ಆತನ್ನ ಸ್ತುತಿಸೋಣವೂ
ಬೇಡಂತ್ಯ ನೋಡು! ಕಡೆಗೆ
ತೋರೋದು ಹೆಚ್ಚು ಕಡಿಮೆ.

೬. ಶ್ರೀಮಂತರಿಂಗೆ ಬಡತನ
ಸರ್ವೇಶ ಕೊಡಲಾರನೆ?
ದರಿದ್ರರಿಂಗೆ ಬಹು ಧನ
ಕೊಡೋಣ ದೊಡ್ಡದಾತಗೆ?
ಒಬ್ಬನ್ನ ಎತ್ತಿ, ಕೆಳಗೆ
ಮತ್ತೊಬ್ಬನನ್ನು ದೊಬ್ಬನೆ?

೭. ನೀನೆಂದು ಬೇಡಿ, ಹೋರನಾಡಿ,
ಸದ್ಭಕ್ತನಾಗಿ ನಡೆದು,
ಯೆಹೋವನನ್ನು ಸ್ತೋತ್ರ ಮಾಡಿ,
ಆತನ್ನ ನಂಬಿ ಬದುಕು!
ವಿಶ್ವಾಸಿಯನ್ನು ದೇವರು
ಎಂದೆಂದು ಬಿಡಲಾರನು.

---

೧೩೭.

Mel. Wirf Sorgen und Schmerz. 106.

೧. ನಂಬೇಸುವನು!
ಓ ಅರುಹಿಸು
ಆ ಪ್ರಿಯಗೆ ಚಿಂತೆಗಳನ್ನು!

೨. ಧಿಕ್ಕರಿಯದೆ
ನೀ ನೋಯುತಲೆ,
ಓ ಶೇರು ಆ ರಕ್ಷಕನನ್ನು!

೩. ನೀ ಪ್ರಾರ್ಥಿಸಲು,
ನಿನ್ ಹೊರೆಯನು
ಎತ್ತಾಕುವನುದ್ಬಲದಿಂದ.

೪. ದಯಾದರಕ
ಸಮಾಧಾನವ
ನಿಂಗೀಯುವನೊಲುಮೆಯಿಂ
ದ.

೫. ಆ ಕುರುಬನ
ಭದ್ರಾಶ್ರಯವ
ಪ್ರವೇಶಿಸಿ, ತ್ಯಜಿಸು ದುಃಖ!

೬. ಸಂಕಷ್ಟಗಳು
ಬಿಟ್ಹೋಗುವವು.
ಕ್ರಿಸ್ತೇಸುವೆ ಹೃದದ ಸುಖ!



೧೩೮.

Mel. Meine Seel ist stille. 148. 81.

೧. ಪ್ರಾಣ ದೇವರಲ್ಲಿ,
ಆತನೊಲ್ಮೆಯಲ್ಲಿ
ಶಾಂತವಾದದೆ!
ಆತ ಧೊರೆಯಾಗಿ
ಎಲ್ಲವಾಳಲಾಗಿ,
ಹೃತ್ತು ತುಂಬುತೆ;
ದಿವಕೆ
ಕಾಲ್ ಏರುತೆ;
ಯೇಸುವೆನ್ನ ಬಿಡೊದಿಲ್ಲ.
ನಂಗೆ ಚಿಂತೆ ಇಲ್ಲ.

೨. ದೇವರೈಕ್ಯದಲ್ಲಿ
ಇರ ಹೃತ್ತಿನಲ್ಲಿ
ಮುಖ್ಯ ಆಶೆಯೇ.
ನನ್ನ ಪುಣ್ಯಕರ್ಮ,
ನನ್ನ ನೀತಿಧರ್ಮ
ದೇವರೈಕ್ಯವೇ.
ಲೋಕದ
ತ್ರೈತಾಪವ
ಪರರರ್ಸಿ ಕೊಳ್ಳುತಾರೆ;
ನಾನು ಬಯ್ಸಲಾರೆ.

೩. ಸರ್ವಲೋಕದಲ್ಲಿ
ಏಕ ಪತಿಯಲ್ಲಿ
ಮೋಹ ಗೊಂಡೆನು;
ನನ್ನ ಯೋಗಧ್ಯಾನ,
ನನ್ನ ಪ್ರಾಣಸ್ಥಾನ
ಇಷ್ಟ ಯೇಸುವು.

ಯೇಸುವೇ
ಪ್ರಾಣೇಶನೇ!
ಪ್ರಿಯ ಈಶನಕ್ಷಕಾಂತಿ
ನಂಗೆ ಪ್ರಾಣಶಾಂತಿ.

೪. ಪೂರ್ಣ ಧೈರ್ಯದಲ್ಲಿ
ತಂದೆಯೆದೆಯಲ್ಲಿ,
ಮಗ, ಮಲಗು!
ಬಪ್ಪುದವದಾನ;
ದೊಡ್ಡ ಸಮಾಧಾನ
ತಂದೆ ಈಯ್ವನು.
ತಾಯಿಯ
ಕಟಾಕ್ಷವ
ಕಾಣ್ಬ ಮೊಲೆಮಗುವಾಗಿ,
ಬಾಳು ಸುಖಿಯಾಗಿ!

೫. ನಿನ್ನ ಎದೆಗಂಬು
ತಾಗಲಾಗಿ, ನಂಬು!
ಯೇಸು ವೈದ್ಯನು.
ಶತ್ರುಭಯ ಬಿಡು!
ಬೀಳೆ, ಮೊರೆ ಇಡು!
ಕರ್ತ, ಸಲುಹು!
ನಂಬಿಕೆ
ತುಂಬಿದ್ದರೆ,
ಮಧ್ಯ ಕಷ್ಟವೆಲ್ಲ ತಾಳ್ವೆ;
ಕಡೆಯಲ್ಲಿ ಬಾಳ್ವೆ.

೬. ಆಮೆನ್! ಯೇಸುವಲ್ಲಿ
ನಂಬಿದವರಲ್ಲಿ
ಯಾರು ಕೆಟ್ಟರು?
ದೇವ ಮಕ್ಕಳನ್ನು
ಕೊಲ್ಲೊ ಹೊರೆಯನ್ನು
ಹೊರಲೀಸನು.
ತಾಳ್ದರೆ,
ಸೋತ್ಹೋಗದೆ,
ಗೆದ್ದು, ತಂದೆಮನೆಘೋಗಿ
ಆದಿ ಸುಖಭೋಗಿ.



## ೧೩೮.

Mel. Gott will's machen. 118.
13. 17. 22.

೧. ಬೇಡ ಭಯ!
ಯೇಸುದಯ
ಶರಣಾರ್ಥಿಕೋಟಿಯೇ!
ಎಲ್ಲ ತಾನು
ನಡಿಸ್ಯಾನು
ಉತ್ತಮ ಪ್ರಕಾರವೇ.

೨. ನಿನ್ನನಾಯ್ದು,
ನಿನ್ನ ಕಾಯ್ದು

ಕರ್ತ ನಿದ್ದೆ ಗೊಂಡಾನೆ?
ಭಯ ಬಿಟ್ಟು,
ನಂಬಿಗಿಟ್ಟು,
ಹೃದವೆತ್ತು ಮೇಲಕೆ!

೩. ತಡದಲ್ಲು
ತ್ವರೆಯಲ್ಲು
ಆತ ತಂದೆ ನಿನಗೆ;
ನಿನ್ನ ಕಷ್ಟ,
ನಿನ್ನ ನಷ್ಟ
ಆತ ಬಲ್ಲ, ಮಗನೆ!

೪. ಕೃಪಾಪತಿ
ಶ್ರೇಷ್ಠ ಗತಿ
ನಿಂಗೆ ನೇಮಿಸಿಹನು.
ಶಾಂತನಾಗಿ
ಇರಲಾಗಿ,
ನಿನ್ನ ಚಿಂತೆ ಹೋಗೊದು.

೫. ನಿನ್ನ ಸುಖ,
ನಿನ್ನ ದುಃಖ
ಕೊಡುವವನಾತನು.
ಚಿಂತೆಯೇನು?
ಭಯವೇನು?
ಆತಗೆಲ್ಲ ಒಪ್ಪಿಸು!

೬. ಹೊರು ನಿನ
ಯೇಸುವಿನ
ಹೌರವಾದ ಕ್ರೂಜೆಯ!
ನಿನಗಲ್ಲಿ
ಪೀಠದಲ್ಲಿ
ಈಯುವನ್ ಕಿರೀಟವ.

---

# IX. ವಿಶೇಷವಾದ ಕಾಲಗಳಿಗೆ ತಕ್ಕ ಗೀತಗಳು.

## a. ಉದಯಗೀತಗಳು.

### ೧೪೦.

Mel. Morgenglanz der Ewigkeit. 94.

೧. ನಿತ್ಯ ಲೋಕಕಾಂತಿಯೇ,
ಮೂಡು ಪೂರ್ಣ ತೇಜದಿಂದ!
ಸರ್ವಜ್ಯೋತಿಮೂಲವೇ,
ನಿನ್ನ ಕಿರಣಂಗಳಿಂದ
ನಮ್ಮ ರಾತ್ರಿ ಗೆಲಿತು
ಓಡಿಸು!

೨. ಬೀಜ ಮೊಳೆಯುತ್ತದೆ
ಮಳೆ ಬಿದ್ದ ಭೂಮಿಯಲ್ಲಿ;
ನಿನ್ನ ಮಂಜು ಬಿದ್ದರೆ
ನನ್ನ ಒಣ ಆತ್ಮದಲ್ಲಿ,
ಹೊಸ ಜೀವತ್ರಾಣವು
ಬಹುದು.

೩. ಹೃದಯಂಗಳೊಳಗೆ
ನಿನ್ನ ಬೆಳಕನ್ನು ಹೊಯ್ದು,
ವಾಕ್ಯಖಡ್ಗದಿಂದಲೆ
ಹಳೆ ದುಃಸ್ವಭಾವ ಕೊಯ್ದು,
ಜೀವದಲ್ಲಿ ನಮ್ಮನು
ಶೇರಿಸು!

೪. ದಿವ್ಯ ಪ್ರೀತಿಸೂರ್ಯನೆ,
ನಿನ್ನ ಕಿರಣಂಗಳನ್ನು
ಹಗೆ ತುಂಬಿದಿಳೆಗೆ
ಹೊಯ್ದು, ಪ್ರೀತಿರಾಜ್ಯವನ್ನು
ಎಲ್ಲ ಭೂಮಿಯಲ್ಲಿಯು
ಸ್ಥಾಪಿಸು!

೫. ನಿತ್ಯ ನೀತಿಸೂರ್ಯನೇ!
ನೀನು ಅಂತ್ಯ ದಿನದಲ್ಲಿ
ಭೂಸಮಾಧಿಯಿಂದಲೇ
ನಮ್ಮನೇಳ ಮಾಡುವಲ್ಲಿ
ನಿತ್ಯ ಮುಕ್ತಿ ನಮಗೆ
ಆಗುತೆ.

---

## ೧೪೧.

Mel. Die güldne Sonne. 60.

೧. ಭಂಗಾರಸೂರ
ಸಂತೋಷಪೂರ
ಈ ಭೂಮಿಯಲ್ಲಿ
ಪ್ರಕಾಶ ಚಲ್ಲಿ
ಆನಂದಪೂರ್ತಿಯ ಹೊಯ್ಯು
ವದು.
ಸುಶಾಂತ ನಿದ್ದೆ
ನಾ ಮಾಡುತಲಿದ್ದೆ;
ಈಗೇಳಲಾಗಿ,
ಹೃತ್ಸಂತಸವಾಗಿ
ದಿವಕೆ ಮುಖವನೆತ್ತಿದೆನು.

೨. ಹಾಡೋಣ! ಬನ್ನಿ!
ಕರ್ತಂಗೆ ತನ್ನಿ
ದಾನಂಗಳನ್ನು!
ಸಮಸ್ತವನ್ನು
ಕರ್ತನಿಗರ್ಪಿಸ ಯುಕುತವೆ!
ಪ್ರಾಮುಖ್ಯ ದಾನ
ಹೃದಖಿಲ ಧ್ಯಾನ!

ಸಂಶಯವೀತ
ಹೃದ್ವೀಣೆಯ ಗೀತ
ಉತ್ತಮ ಧೂಪವು ಕರ್ತನಿಗೆ!

**೩.** ಕೃಪೆಯ ವರ,
ಕೇಡಿನ ಹರ,
ದಿನದ ಕಾಂತಿ,
ರಾತ್ರಿಯ ಶಾಂತಿ
ಆತನ ದಯೆಯ ಕೃತ್ಯಗಳು.
ಆತನು ತಂದ
ವಿಶ್ರಮಿಕೆ ಚಂದ!
ಏಳಲಿಕಾಗಿ,
ತೇಜೋದಯವಾಗಿ
ಆತನ ದಯೆಯು ಹೊಳೆವದು.

**೪.** ಓ ಕರ್ತ, ನನ್ನ
ಪಾಪಂಗಳನ್ನ,
ಕಟಾಕ್ಷವಿಟ್ಟು,
ನೀ ಸುಟ್ಟು ಬಿಟ್ಟು,
ದೇವರೆ, ಮನ್ನಿಸು ದುಷ್ಟನಿಗೆ!
ಮುಂದಾಗೊ ಸುಖ,
ಮತ್ತಾಗುವ ದುಃಖ
ನಿನ್ ಹಸ್ತದಲ್ಲಿ;
ನೀನೆಲ್ಲವ ಬಲ್ಲಿ.
ನಿನಗೆ ಎಲ್ಲವನೊಪ್ಪಿಸಿದೆ.

---

## b. ಅಸ್ತಮಾನಗೀತಗಳು.

### ೧೪೨.

Mel. Nun ruhen alle Wälder. 48. 54. 97.

**೧.** ಈ ಹಗಲೀಗ ಸಂತು,
ಎಲ್ಲೆಲ್ಲು ನಿದ್ದೆ ಬಂತು
ಭೂಜೀವರಾಶಿಗೆ;
ಹೀಗಾಗಿ ನೀನೆ ಹಾಡಿ,
ಕರ್ತಂಗೆ ಸ್ತೋತ್ರ ಮಾಡಿ,
ಓ ಎಚ್ಚರೆನ್ನ ಮನವೆ!

**೨.** ನೀ, ಸೂರ್ಯ, ಬೀಳಲಂದು
ದಿನಾರಿರಾತ್ರಿ ಬಂದು,
ಕಾರ್ಗತ್ತಲಿಕ್ಕಿತು.
ಆದಾಗ್ಯು ಮನದಲ್ಲಿ
ಪ್ರಕಾಶವನ್ನು ಚಲ್ಲಿ
ಬೇರೊಬ್ಬ ಸೂರ್ಯನೆದ್ದನು.

**೩.** ವಿಶಾಲಾಕಾಶದಲ್ಲಿ
ಭಂಗಾರಕಾಂತಿಯಲ್ಲಿ

ತಾರಾತಿತೇಜವು;
ನಾನೂ ಪ್ರಕಾಶಿಸ್ಯೇನು,
ನಾ ಹಾಗೆ ಹೊಳೆದೇನು,
ಈ ಕೀಳ ಲೋಕ ಬಿಡಲು.

೪. ಶರೀರ ಕಷ್ಟ ಬಿಟ್ಟು,
ವಸ್ತ್ರಾದಿ ತೆಗೆದಿಟ್ಟು,
ವಿಶ್ರಾಂತಿ ಪಡುತೆ;
ಸೌಂದರ್ಯ ವಸ್ತ್ರವನ್ನು,
ಶೃಂಗಾರಪೂರ್ತಿಯನ್ನು
ಕೊಡೋನು ಕ್ರಿಸ್ತನೆಮಗೆ.

೫. ಕಷ್ಟಾಂತ ಬರಲಾಯ್ತು;
ಸಂತೋಷವೇಳೆಯಾಯ್ತು
ವಿಶಿಷ್ಟ ಅಂಗಕೆ.
ಕಡೇಲಿ ಎಂಥ ಸುಖ,
ಈ ಪಾಪ, ಕಷ್ಟ, ದುಃಖ
ಸಮಾಪ್ತವಾಗಿ ಹೋಗಲೆ!

೬. ಸಾಕೆಂತ, ಬಿದ್ದಿದ್ದೇನೆ;
ವಿಶ್ರಾಂತಿ ಕೊಡುತೇನೆ
ಆಯಾಸದೇಹಕೆ.
ಆಯಾಸ ಮುಗಿಯೋದು,
ಶರೀರಕೊದಗೋದು
ಭೂಗರ್ಭದಲ್ಲಿ ಹಾಸಿಗೆ.

೭. ನಾ ಕಣ್ಣು ಮುಚ್ಚಲಾಗಿ,
ದೇಹಾತ್ಮವೊಲ್ಮೆಯಾಗಿ
ಕಾಯೋವನ್ಯಾವನು?
ಓ ಕರ್ತ, ದಯ ಗೊಂಡು,
ದೇಹಾತ್ಮ ಕಾದು ಕೊಂಡು,
ಕೇಡೆಲ್ಲ ಪರಿಹರಿಸು!

೮. ಉಭಯ ರೆಕ್ಕೆಯನ್ನು
ಬಿದಿರ್ಚಿ, ಮರಿಯನ್ನು,
ಓ ಯೇಸು, ಹೊದಗು!
ವಿರೋಧಿಮೋಸವನ್ನು
ಹೀನೈಸಿ, ದೂತರನ್ನು
ಸಹಾಯಕಾಗಿ ಕಳುಹು!

---

## ೧೪೩.

Mel. O Jesu Christ, mein's Lebens Licht. 45. 24. 44. 130. 131. 132.

೧. ಓ ಕ್ರಿಸ್ತ, ನೀತಿಸೂರ್ಯನೆ,
ಸಮಸ್ತ ಭಕ್ತಸಭೆಗೆ
ಆಕಾಶದಿಂ ಪ್ರಕಾಶಿಸಿ,
ಪ್ರಕಾಶ ಉಂಟು ಮಾಡುತಿ.

೨. ಓ ನಮ್ಮ ಪ್ರಿಯ ಕರ್ತನೆ,
ಆಧಾರ ಕೊಡು ನಮಗೆ!
ಸೈತಾನನಿಂದ ನಮ್ಮನು
ಕೃಪಾಳುವಾಗಿ ರಕ್ಷಿಸು!

**೩.** ಪವಿತ್ರ ನಿನ್ನ ರಕ್ತವು
ನಮ್ಮನ್ನು ಶುದ್ಧ ಮಾಡೊ
ದು.
ಶರೀರ ನಿದ್ದೆ ಗೈಯಲು,
ವಿಶ್ವಾಸ ಎಚ್ಚರ್ತಿಹುದು.

**೪.** ನಮ್ಮನ್ನು ಕಾಯಿ, ಕ್ರಿಸ್ತ
ನೇ!
ನೀನೆಮ್ಮ ಭದ್ರ ದುರ್ಗವೇ!
ಮುಂಜಾನೆ ಎಚ್ಚರಾಗಲು,
ನಿನ್ನನ್ನು ಸ್ತುತಿಸೋಣವು!

---

## c. ಯುಗಾದಿಗೀತವು.

### ೧೪೪.

Mel. Nun lasst uns gehn und treten.

**೧.** ನಾವೀಗ ಕೂಡಿ, ಹಾಡಿ,
ಕರ್ತನ್ನ ಕೊಂಡು ಆಡಿ,
ದಯಾಜ್ಞರಾಗಿರೋಣ!
ಆತಂಗೆ ಪ್ರಾರ್ಥಿಸೋಣ!

**೨.** ಒಂದೊರ್ಷ ಬಿದ್ದು ಸಂದ,
ಮತ್ತೊಂದು ಮೂಡಿ ಬಂದ
ಈ ದಿನಕಾತ ತಾನೆ
ನಮ್ಮನ್ನು ತಂದಿದ್ದಾನೆ.

**೩.** ಸಹಸ್ರ ಚಿಂತೆಯಲ್ಲು,
ಹೃತ್ಕಾಯಕಷ್ಟದಲ್ಲು
ವಿಜಯ ಹೊಂದಿದ್ದೇವೆ;
ಹೃದ್ಧೈರ್ಯ ಪಡುತೇವೆ.

**೪.** ಸಂಪ್ರೀತಿಯುಳ್ಳ ತಾಯ್ಯು
ರೋಗಿಷ್ಠ ಮಗು ಕಾಯ್ಯು-
ವೋಲ್ ದೇವರೆಮ್ಮ ಕಾದ;
ಸಹಾಯಗಾರನಾದ.

**೫.** ನೀನೆಮ್ಮ ಜೀವಭರ್ತ
ನಿನ್ನಕ್ಷಿಯಿಂದ, ಕರ್ತ,
ಕಾಪಾಡು! ನಮ್ಮ ಬಲ
ಯತ್ನೈಸಲೇನು ಫಲ?

**೬.** ದಿನಾಲು ಹೊಸದಾಗಿ
ನೀ ಪ್ರೀತಿಸಿದ್ದಕಾಗಿ
ಎಳ್ಳೆಮ್ಮ ಸ್ತೋತ್ರಸ್ವರ
ಆಲೈಸು, ಶೋಕಹರ!

**೭.** ಇನ್ನಾಗೊ ಶ್ರಮೆಯೊಳ್ಗೆ,
ವಿವಿಧಭಾರದೊಳ್ಗೆ

ನಮ್ಮಾತ್ಮ ನೆಳ್ದರ್ದು ಕುಗ್ಗೆ,
ಆಗೆಮ್ಮ ಸುಖಬುಗ್ಗೆ!

೮. ನಿನ್ನಾಶ್ರಯಕ್ಕೆ ಬಂದು,
ನಿನ್ನೊಲ್ಮೆ ತೋರಿಸಂದು,
ಗೋಳಾಡಲೊಬ್ಬ ನರ,
ತಂದಿಕ್ಕು ತಾಳ್ಮೆವರ!

೯. ರಕ್ತಾಶ್ರು ಚಲ್ವದನ್ನು,
ಐ, ನೀಗಿ, ಭೂಮಿಯನ್ನು
ಅನ್ಯೋನ್ಯ ಶಾಂತಿಯಿಂದ
ಮುಚ್ಚಿನ್ನು ವೇಗದಿಂದ!

೧೦. ಈ ಹಿರಿ ಕಿರ್‍ಯರಲ್ಲಿ
ನಿನ್ನೊಲ್ಮೆಕಾಂತಿ ಚಲ್ಲಿ,
ಕೊಟ್ಟಿಡು ನಮ್ಮ ಪಾದ
ಪೋಪಲ್ಲಿ ಆಶೀರ್ವಾದ!

೧೧. ದುರ್ಗತಗಾಗು ಗತಿ!
ವಿಮನಗಾಗು ಮತಿ!
ನಿರ್ಬಲಗಾಗು ಬಲ!
ನಿಃಸ್ಥಲಗಾಗು ಸ್ಥಲ!

೧೨. ರೋಗಿಸ್ಥರಿಂಗೆ ದಯ
ಗೈದಿಹ ಕಷ್ಟ, ಭಯ
ತಾಳ್ವಾತ್ಮರಾತ್ಮಭಾರ
ಕಂಡೀವು ಪರಿಹಾರ!

೧೩. ವರಾತಿಶ್ರೇಷ್ಠವಾದ
ನಿನ್ನಾತ್ಮಸುಪ್ರಸಾದ
ಕೊಂಡೊಯ್ಯಲಾ ಪ್ರಸನ್ನ
ಚೀಯೋನ್ಗೆ ಭಕ್ತರನ್ನ!

೧೪. ಓ ಕೊಡು ಬೇಡಿದ್ದನ್ನು!
ಕ್ರಿಸ್ತೇಸುರಕ್ಷೆಯನ್ನು
ಈ ಹೊಸ ವರ್ಷದಲ್ಲಿ
ಕಣ್ಣಾಗಿಸೆಲ್ಲರಲ್ಲಿ!

---

## X. ನಿತ್ಯ ಜೀವದ ನಿರೀಕ್ಷೆಯು.

### ೧೪೫.

Mel. Es ist noch eine Ruh vorhanden. 143.

೧. ಇನ್ನುಂಟು ನಿನಗೊಂದು
ಶಾಂತಿ;
ಬೇಸತ್ತ ಹೃತ್ತೆ, ಬೆಳಗು!
ನೀ ಬಯ್ಸುವಂಥ ಸೂರ್ಯ
ಕಾಂತಿ
ಈ ಶೆರೆಯಲ್ಲಿ ಕಾಣದು.

ಆ ಕುರಿಮರಿ ನೋಡು! ಅಲ್ಲಿ
ಸದಾ ಸಂತುಷ್ಟನಾಗ ಬಲ್ಲಿ.
ಈ ಬೀಯ ಹೊರೆ ಬಿಸುಡು!
ಹೋರಾಟ ಬೇಗ ಮುಗಿ
ಯೋದು;
ಈಗೀಗ ಗುರಿ ಕಾಣಿಸೋದು;
ವಿಶ್ರಾಂತಿ ಬೇಗ ಬಪ್ಪುದು.

೨. ಅನಂತವಾದ ಶಾಂತಿಯ
ನ್ನು
ಅನಾದಿಯಿಂದ ದೇವರು,
ಇನ್ನ್ ಹುಟ್ಟದಂಥ ಮಕ್ಕಳನ್ನು
ಮುನ್ನೆನ್ನು, ಸಿದ್ಧ ಗೈದನು.
ಕ್ರಿಸ್ತೇಸು ನಿತ್ಯ ಶಾಂತಿಗಾಗಿ
ಸ್ವಜೀವ ಕೊಟ್ಟು ಬಲಿಯಾಗಿ,
ಬೇಸತ್ತ ಪಾಪಿಜಾತಿಗೆ
ವಿಶ್ರಾಂತಿ ಕೊಂಡು ಕೊಂಡಿ
ದ್ಧಾನೆ;
ಆಮೋದವಾಗಿ ಸಾರುತಾನೆ
ವಿಶ್ರಾಂತಿವಾಕ್ಯ ಲೋಕಕೆ.

೩. ಇಂಪಾದ ಮೇಳವನ್ನು
ಕೇಳಿ,
ನಿರಾಶೆ ಬಿಡಿ, ಭಕ್ತರೇ!
ಸಾಕಾಯ್ತು ಚಿಂತೆ! ಎಂತ,
ಹೇಳಿ,
ಆಯಾಸ ಪಟ್ಟ ಮಕ್ಕಳೇ!
ಅಸಹ್ಯ ಭಾರ ತೆಗದಿಟ್ಟು,
ಸಂಪೂರ್ಣ ದೃಢ ನಂಬಿಕಿಟ್ಟು
ಕ್ರಿಸ್ತೇಸು ಕೊಟ್ಟ ವಾಕ್ಯದಿ,
ಸೈತಾನ ಭಯ ಕೊಡುವಲ್ಲಿ
ನೀವಂಜ ಬೇಡಿ! ಕರ್ತನಲ್ಲಿ
ವಿಶ್ವಾಸವಿಟ್ಟು, ಬನ್ನಿರಿ!

೪. ವ್ಯಾಧೀಲಿ ಬಿದ್ದರೇನು?
ಏನು
ಈ ಯಾತ್ರೆಯಲ್ಲ್ಯವಶ್ಯವು?
ಮೆತ್ತಾನ ಸಜ್ಜೆಯಲ್ಲದೇನು
ರೋಗಿಷ್ಠ ಕೇಳಿ ಕೊಂಬನು?
ಯಾತ್ರಸ್ಥ ತಂಪು ನೀರಿನಿಂದ
ದಾಹಾಗ್ನಿಯಾರಿಸೋದರಿಂದ
ಪೂರಾಗಿ ತೃಪ್ತನಾಹನು.
ಈ ಲೋಕದೊಳಗಲ್ಪ ಶಾಂತಿ,
ಆ ಲೋಕದೊಳ್ ಮಹಾ ವಿ
ಶ್ರಾಂತಿ;
ಎಂದೆಂದಿಗದು ತೀರದು.

೫. ಇಲ್ಲ್ಯತ್ತು ಬೀಜ ಬಿತ್ತು
ತೇವೆ,
ಅಲ್ಲ್ಯರ್ತಿಯಾಗಿ ಕೊಯ್ಯೋ
ದು;
ಅನಾಥರಾಗಿ ಇಲ್ಲಿದ್ಧೇವೆ,

ಅಲ್ಲೆಮ್ಮ ತಂದೆಮನೆಯು;
ಅಲ್ಲೆಮಗೊಂದು ಚಿಂತೆಯಿಲ್ಲ;
ಅಲ್ಲೈರಿದಂಗೆ ಮೃತ್ಯುವಿಲ್ಲ;
ನಮ್ಮರಸನ್ನ ಕಾಣ್ಬೆವು.
ಅಮೃತವಾತ ಕುಡಿಸೋನು,
ಕಣ್ಣೀರನೊರ್ಸಿ ತೆಗೆಯೋ
ನು;
ಇಷ್ಟಾರ್ಥವೆಲ್ಲ ಬಪ್ಪುದು.

೬. ಅಲ್ಲಲ್ಲಿ ಸಮಾಧಾನವನ್ನು
ಹೊಂದೋಣ, ಚಿಂತೆಯಿಲ್ಲದೆ!
ಆಶ್ರೈಸಿ ಕೊಳ್ಳಿ ಕರ್ತನನ್ನು,
ಆಯಾಸ ಪಟ್ಟ ಜನರೆ!
ಆ ತೇಜೋಮಯ ಸೇನೆ ಯಾ
ರು?
ಓ ಆತ್ಮ, ರೆಕ್ಕೆ ಎತ್ತಿ, ಹಾರು!
ಇನ್ನಿಲ್ಲಿ ನಿಲ್ಲಲೇತಕೆ?
ಏಳ್! ನಡು ಕಟ್ಟು ತೀವ್ರವಾಗಿ!
ಏಳೇಳು, ಜಯಶಾಲಿಯಾಗಿ!
ವಿಶ್ರಾಂತಿವರ್ಷ ಬಂದದೆ!



## ೧೪೬.

Mel. Schwing dich auf zu deinem Gott. 79.

೧. ಇನ್ನು ಒಂದು ತೀರಿಕೆ
ನಮ್ಮ ಕರ್ತನಿಂದ
ಎಲ್ಲ ದೇವಸಭೆಗೆ
ಬರುವದರಿಂದ,
ದುಃಖವುಳ್ಳ ಆತ್ಮವೇ,
ಚಿಂತೆಯನ್ನು ಬಿಡು!
ಯೇಸು ಕ್ರಿಸ್ತನಲ್ಲಿಯೇ
ದೃಢ ನಂಬಿಕಿಡು!

೨. ನಮ್ಮ ಪ್ರಿಯ ರಕ್ಷಕ
ನಮ್ಮ ಹೊರೆಯನ್ನು
ತಾನು ಹೊತ್ತು, ಮಾಡಿದ
ಪರಿಹಾರವನ್ನು.
ಯೇಸು ನಮ್ಮ ವೈರಿಯ,
ತಾನೆ ಸತ್ತು, ಗೆದ್ದ;
ನಮ್ಮ ನೀತಿಗೋಸ್ಕರ
ಮೃತಿಯಿಂದ ಎದ್ದ.

೩. ನಮ್ಮ ನಿತ್ಯ ಜೀವವು
ಯೇಸುನಾಥದಾನ;
ಯೇಸುನಾಥರಕ್ತವು
ನಮ್ಮ ಸಮಾಧಾನ;
ನಮ್ಮ ಪಾಪಸಾಲವು
ಆತನಿಂದ ಸಂತು.
ದೇವರಾತ್ಮವೊಲೆದು,
ನಮ್ಮಲಿರ ಬಂತು.

೪. ಚಿಂತೆಯವರೆಲ್ಲರೆ,
ಚಿಂತೆಯೆಲ್ಲ ಬಿಟ್ಟು,

ನಿಮ್ಮ ಪೂರ್ಣ ಕೋರಿಕೆ
ಯೇಸುವಲ್ಲಿ ಇಟ್ಟು,
ನಿತ್ಯಜೀವಮಾಲೆಯ
ನೋಡಿ, ಧೈರ್ಯ ತನ್ನಿ!
ಆ ಸುವರ್ಣಪಟ್ಟಣ
ಶೇರ ಓಡಿ ಬನ್ನಿ!



## ೧೪೭.

Mel. Erheb', o Seele, deinen Sinn. 115.

೧. ಈ ಭೂಮಿಗಂಟೊದೇತ
ಕೆ?
ಓ ಪ್ರಾಣ, ಮೇಲಕೇರು!
ನಿನ್ನೆಡೆ ದೇವಲೋಕವೆ!
ಸ್ವಸ್ಥಳದಲ್ಲಿ ಶೇರು!

೨. ಈ ಭ್ರಾಂತಿ ಯಾಕೆ? ನಿ
ನಗೆ
ಈ ಲೋಕ ಕೊಡೊದೇನು?
ಆ ಲೋಕದಾಶೆ ಇದ್ದರೆ,
ಈ ಲೋಕಭೋಗವೇನು?

೩. ದೇವಜ್ಞನಾದ ಕ್ರೈಸ್ತಗೆ
ಭೂಸಂಗ ಹಿತವಲ್ಲ;
ಸದ್ಭಕ್ತ ದೇವರಲ್ಲಿಯೆ
ಸಂತೃಪ್ತನಾಗ ಬಲ್ಲ.

೪. ಕೇಡೆನ್ನ ಮೇಲೆ ಬಿದ್ದರೂ,
ನಿರಾಶೆ ಪಡೆನೈಯ್ಯ;
ನಿನ್ನಕ್ಷಿಕಾಂತಿ ಎಂದಿಗೂ
ಉತ್ಸಾಹವೆನಗೈಯ್ಯ.

೫. ಈ ಲೋಕ ಬೀಡು ಮಾ
ತ್ರವೇ,
ನಂಗಿಲ್ಲಿ ಸ್ವಾಸ್ಥ್ಯವಿಲ್ಲ;
ಸ್ವಪಟ್ಣ ಪರಲೋಕದ್ದೇ,
ಅಲ್ಲ್ಯರ್ತಿ ಕುಂದೊದಿಲ್ಲ.

೬. ಸ್ವದೇಶವಲ್ಲಿ; ಅಲ್ಲಿಯೆ
ನಿರಂತಜೀವಜಲ.
ಹೋರಾಡುವೇಸುದಾಸಗೆ
ಅಲ್ಲೇ ವಿಶ್ರಾಂತಿಸ್ಥಲ.

೭. ಅಲ್ಲೇಸು ಕ್ರಿಸ್ತ ಪ್ರಭೆಯ
ಸಾಮ್ರಾಜ್ಯ ಸ್ಥಾಪಿಸೋನು;
ಸದ್ಭಕ್ತ ಕ್ರಿಸ್ತಘನದ
ಸಾರೂಪ್ಯ ಪಡೆಯೋನು.

೮. ಓ ಕರ್ತ, ಇಹಗಾಡಿನೊ
ಳ್
ಕಟಾಕ್ಷದಿಂ ಕಾಪಾಡು!
ಪರಾಮಿತೌಜಸ್ಥಾನದೊಳ್
ನನ್ನನ್ನು ಶೇರ ಮಾಡು!



## ೧೪೮.

Mel. Wenn ich von hinnen scheide. 147. 77.

೧. ಈ ಲೋಕ ಬಿಟ್ಟು ಹೋ
ಗ
ಸಂತೋಷ ಪಡುವೆ.
ಓ ಯೇಸು, ನನ್ನ ಭೋಗ
ಎಂದೆಂದು ನಿನ್ನಲೆ!
ಸುಕ್ಷೇಮದಂಗಿಯ
ನೀನೊಲೆದೆಂಗೆ ತೊಟ್ಟ;
ಪಾಪಿಷ್ಠ ನಂಗೆ ಕೊಟ್ಟ
ಸುನೀತಿವಸ್ತ್ರವ.

೨. ಸರ್ವೇಶದೃಷ್ಟಿಯಲ್ಲಿ
ಸ್ವನೀತಿ ಹೇಸಿಕೆ;
ಸರ್ವಜ್ಞನಕ್ಷದಲ್ಲಿ
ಕಳಂಕ ತೋರದೆ?
ನಂಗೇನು ಪುಣ್ಯವು?
ಎಲ್ಲೆಲ್ಲು ಕೆಟ್ಟ ಕಲೆ!
ಹರ್ಕಾದ ಜೇಡಬಲೆ
ಶೃಂಗಾರವಾಗದು.

೩. ದಯಾಳು ದೇವರನ್ನು
ವಿಶ್ವಾಸಿಸುತ್ತಲೇ
ಸುಕ್ಷೇಮವಸ್ತ್ರವನ್ನು
ನಿಂಗಾತನೀಯನೇ?
ನಿಂಗೀಯ್ವನಾತನು
ಅಮರ್ತ್ಯತಾಕಿರೀಟ.
ಓ ಪ್ರಾಣ, ಮೃತಿಕೀಟ
ನಿನ್ನನ್ನು ಮುಟ್ಟದು.

೪. ಈ ವಸ್ತ್ರ ಕೊಳ್ಳಲಾರ
ನಿರ್ಲಜ್ಜಾ ಪಾಪಿಯು;
ಸರ್ವೇಶನೀ ಶೃಂಗಾರ
ವಿಶ್ವಾಸಿಗೀಯ್ವನು.
ಓ ಪ್ರಿಯ ಅರಸು!
ಈ ನೀತಿವಸ್ತ್ರವಿತ್ತು,
ಮಾಂಸಾಶೆಯೆಲ್ಲ ಕಿತ್ತು
ನನ್ನಿಂದ ಬಿಸುಡು!

೫. ನೀನಿತ್ತ ವಸ್ತ್ರವನ್ನು,
ನಾ ಸಾಯುವನಕಾ
ಕಾಪಾಡು! ಬುದ್ಧಿಯನ್ನು
ಈಯ್ ನನಗೊಡೆಯಾ!
ತುತೂರಿ ಕೇಳಲು,
ಈ ವಸ್ತ್ರವುಟ್ಟು, ಏರಿ,
ನೀ ಕೂತ ಪೀಠ ಶೇರಿ,
ಸಂತೃಪ್ತನಾಹೆನು.



## ೧೪೯.

Mel. Ruhet wohl, ihr Todtenbeine. 113.

೧. ಈ ಶರೀರ ಭೂಮಿಯಲ್ಲಿ
ಶಾಂತ ನಿದ್ದೆ ಮಾಡಲಿ!
ಚಿಂತೆ ಇಲ್ಲ! ಕಡೆಯಲ್ಲಿ
ಕರ್ತನದನೆಬ್ಬಿಸಿ,
ಗೋರಿಯಿಂದ ಕರೆಯೋನು,
ತಾನಿರ್ವಲ್ಲಿ ಶೇರಿಸೋನು.

೨. ಕ್ರಿಸ್ತವಯವಂಗಳನ್ನು
ಮೃತ್ಯು ಹಿಡುಕೊಳ್ಳದು;
ಕರ್ತ ತನ್ನ ಶ್ವಾಸವನ್ನು
ಬೂದಿ ಮೇಲೆ ಬಿಡಲು,
ಕೊಳತದ್ದು ಚಿಗುರೀತು,
ಸತ್ತ ದೇಹ ಜೀವಿಸೀತು.

೩. ಯೇಸು ಸಾವಿನಿಂದಲೆ
ದ್ದು,
ಸಾವಿನಧಿಕಾರವ
ಹೊಂದಿದವನನ್ನು ಗೆದ್ದು,
ತನ್ನ ಭಕ್ತಜನರ
ನಿತ್ಯಕ್ಷೇಮಪೂರ್ತಿಯಲ್ಲಿ
ಶೇರಿಸೋನು ದಿವದಲ್ಲಿ.



## ೧೫೦.

Mel. Jesus meine Zuversicht. 58. 7. 8. 33. 55. 93.

೧. ಉಂಟು ಒಂದು ದೇಶವು;
ಅಲ್ಲಿ ಪಾಪವೇನು ಇಲ್ಲ;
ಮೃತಿಗೂ ಪಿಶಾಚಿಗೂ
ಅಲ್ಲಿ ಅಧಿಕಾರವಿಲ್ಲ.
ಬನ್ನಿ, ಭ್ರಾತೃಗಳಿರಾ,
ಅಲ್ಲೆ ಶೇರ ಹೋಗುವಾ!

೨. ಅಲ್ಲಿ ಒಬ್ಬ ಉತ್ತಮ
ವೈದ್ಯಗಾರ ನಮಗಲ್ಲ?
ಎಲ್ಲ ರೋಗಕೌಷಧ
ಕೊಟ್ಟು, ಸ್ವಸ್ಥ ಮಾಡ ಬಲ್ಲ.
ಬನ್ನಿ, ಭ್ರಾತೃಗಳಿರಾ,
ಅಲ್ಲೆ ಸ್ವಸ್ಥರಾಗುವಾ!

೩. ಅಲ್ಲಿ ಬಲಿದರಸು
ಕಾಯುತಾನೆ ಪ್ರಜೆಯನ್ನು;
ಹಶು ದಾಹಗಳಿಗು
ಮಾಡುತಾನೆ ಅಂತವನ್ನು.
ಬನ್ನಿ, ಭ್ರಾತೃಗಳಿರಾ,
ಅಲ್ಲೆ ಸುಖ ಹೊಂದುವಾ!

೪. ನಿತ್ಯರಾಜ್ಯಸುಖಕೆ
ಕ್ರಿಸ್ತ ತನ್ನ ಭಕ್ತರನ್ನು
ಒಯ್ದು, ಕಡು ರೋಗಿಗೆ

ಈಯ್ವನೊಳ್ಳೆ ಕ್ಷೇಮವನ್ನು.
ಬನ್ನಿ, ಭ್ರಾತೃಗಳಿರಾ,
ಅಲ್ಲೆ ಶೇರ ಹೋಗುವಾ!

೧೫೧.

Mel. Sollt es gleich bisweilen scheinen. 20. 140.

೧. ಉಂಟು ನಿಷ್ಕಳಂಕ ದೇಶ;
ನಮಗದರೊಳ್ ಪ್ರವೇಶ.
ಅಲ್ಲಿ ಶೇರಿದಾಗಲು
ನಿತ್ಯ ಕ್ಷೇಮ ಶಿಕ್ಕೊದು.

೨. ಮರಣಾಬ್ಧಿಯತಿಘೋಷ
ನಮ್ಮ ಕಿವಿಗೊಳ್ಳೆ ತೋಷ;
ಸದ್ವಿಶ್ವಾಸನಾವೆಯು
ದಾಟಿ ಹೋಗ ಬಹುದು.

೩. ಇಹಸುಖವೆಲ್ಲ ಕಷ್ಟ;
ಇಹಲಾಭವೆಲ್ಲ ನಷ್ಟ;
ಇಹಕ್ಷೇಮ ತಾಪವು;
ಇಹನೀತ್ಯನೀತಿಯು.

೪. ಪರದಲ್ಲಿ ನೋವು, ಸಾವು,
ಅಂಧಕಾರ, ಛಳಿ, ಕಾವು,
ಚಿಂತೆ, ದುಃಖ ಇಲ್ಲವು;
ಅಲ್ಲಿ ಸೌಖ್ಯ ತೀರದು.

೧೫೨.

Mel. Ei wie so selig schläfest du. 114. 43. 127. 129.

೧. ಓ ಒಳ್ಳೆ ನಿದ್ದೆ ಮಾಡುತಿ,
ಹೋರಾಟ ತೀರಿಸಿ!
ಸುಶಾಂತಿ ಗೊಂಡಿ, ಮಲಗಿ
ಕ್ರಿಸ್ತೇಸುಹಸ್ತದಿ.

೨. ಸಂಕಷ್ಟ ನಿನಗೋಸ್ಕರ
ತಾಳ್ದೊಲ್ಮೆಯರಸ,
ಸಮಾಪ್ತ! ಎಂತ, ಜೋಗುಳ
ನಿನ್ನಾತ್ಮಕ್ಹಾಡಿದ.

೩. ನೀನೀಗ ಭೂಮಿಯೊಳಗೆ
ಕಾಳಾಗಿ ಬೀಳುತಿ;
ಸೌಂದರ್ಯರೂಪವಾಗಿಯೆ
ಆ ಮೇಲೆ ಏಳುವಿ.

೪. ನಿನ್ನತಿಪ್ರಿಯ ಮುಖವ
ಮಣ್ಣಡಗಿಸಲಿ!
ನಿನ್ನಾತ್ಮಕೀಗಲುತ್ತಮ
ತೃಪ್ತ್ಯಾಯ್ತು ಪರದಿ.

೫. ನಾವಿನ್ನು ಕೀಳ ಲೋಕದಿ
ದೇಶಾಂತ್ರಜನರೆ;

ಓ ಕರ್ತ, ನಮ್ಮ ದಾಟಿಸಿ,
ವೈ ನಿನ್ನ ಕಡೆಗೆ!



## ೧೫೩.

Mel. Wachet auf! ruft uns die Stimme. 47.

೧. ಕಾಯುವವರೆದ್ದಿದ್ದಾರೆ;
ಓ ಎಚ್ಚರೆಂತ, ಕೂಗುತಾರೆ;
ಓ ಎಚ್ಚರಾಗು, ಚೀಯೋನೇ!
ಘನವಾದ ಶಬ್ದದಲ್ಲಿ
ಕೂಗೋರು ಮಧ್ಯ ರಾತ್ರಿಯ
ಲ್ಲಿ—
ಪ್ರವೀಣ ಕನ್ಯಾಸ್ತ್ರೀಯರೇ,
ನಿಮ್ಮಧಿಪನಿಗೋ!
ದೀಪಂಗಳಂ ತರ್ರ್ರೋ!
ಹಲ್ಲೆಲೂಯಾ!
ಸಮೀಪವೆ
ವಿವಾಹಕೆ
ಪ್ರವೇಶ ಮಾಡೊ ಘಳಿಗೆ!

೨. ಈ ಉತ್ಸಾಹರಾಗಕಾಗಿ
ಚೀಯೋನು ಹೃದ್ಯ ಹರ್ಷ
ವಾಗಿ
ಎಚ್ಚತ್ತು, ಎದುರ್ಗೊಳ್ಳಲು,
ಕೋಟಿಸೂರ್ಯಶೋಭಾ
ಕ್ರಾಂತ,
ಪ್ರಸನ್ನ, ಸತ್ಯವಂತ ಕಾಂತ
ಆಕಾಶದಿಂದ ಬಂದನು.
ಕಿರೀಟಶ್ರೇಷ್ಠ, ಬಾ,
ಓ ಯೇಸು, ದೇವಜಾ!
ಹೊಸಿಯನ್ನ!
ನಿನ್ನೊಡನೆ
ಕೂಡಿದ್ದರೆ
ಕೂಡ್ರೋಣ ನಿನ್ನ ಮೇಜಿಗೆ!

೩. ನಾನಾವಾದ್ಯಶಬ್ದದಿಂದ,
ಮನುಷ್ಯದೂತಧ್ವನಿಯಿಂದ
ಏಳೋದು ನಿನ್ನ ಸ್ತುತಿಯು.
ನಾವು ರತ್ನದ್ವಾರ ಶೇರಿ,
ಸಿಂಹಾಸನದ ಹತ್ರ ಏರಿ,
ಒಡ್ಡೋಲಗಕ್ಕೆ ಬಂದೆವು;
ಕಣ್ಣೆಂದು ಕಾಣದ,
ಕಿವ್ಯೆಂದು ಕೇಳದ
ಆತ್ಮತೃಪ್ತಿ
ಆಯ್ತುಹಹ!
ನಿಂಗೊಡೆಯ,
ಅನಂತಸ್ತೋತ್ರ ಮಾಡುವ!



## ೧೫೪.

Mel. O wie selig seid ihr doch ihr Frommen. 145.

೧. ಜೀವಯಾತ್ರೆಯಲ್ಲಿ ಎ
ಷ್ಟೊ ದುಃಖ!
ಭ್ರಾತ, ಸತ್ತ ನಿನಗೆಷ್ಟೊ ಸುಖ!
ಯಾನ್ ಕಷ್ಟದಾಳು!
ನಿನಗೇಸುವಲ್ಲಿ ಒಳ್ಳೆ ಬಾಳು!

೨. ಕೆಟ್ಟ ಶೆರೆಯಲ್ಲಿ ಬಿದ್ದೆನಲ್ಲ?
ನನ್ನ ದುಃಖ ಎಣಿಸಾರು ಬಲ್ಲ?
ಈ ಜೀವ ಅತಿ
ಚಿಂತೆಯುಳ್ಳ, ವ್ಯಥೆಮಯ ಗ
ತಿ.

೩. ನಿಂಗೆ, ಭ್ರಾತ, ತೀರಿತೆಲ್ಲ
ಭ್ರಾಂತಿ;
ನಿನಗಾಯ್ತು ನಿತ್ಯವಾದ ಶಾಂ
ತಿ.
ವಿಶ್ರಾಂತಿಯಲ್ಲಿ
ಶೇರಿ, ಸತ್ಯ ಸುಖ ಪಡ ಬಲ್ಲಿ.

೪. ಯೇಸು ಒರಿಸೋನು ಅ
ಶ್ರುವನ್ನು;
ಈಯ್ವನಾತನಿಷ್ಟಪೂರ್ತಿಯ
ನ್ನು.
ಆ ಸ್ಥಾನದಲ್ಲಿ
ನಿದ್ದೆ ಮಾಳ್ಪಿ ಯೇಸುಜೋಕೆ
ಯಲ್ಲಿ.

೫. ವ್ಯರ್ಥ ಚಿಂತೆ ಪಡುತಿರ್ವ
ದೇಕೆ?
ಮೋಕ್ಷದಲ್ಲಿ ಶೇರದಿರಲೇಕೆ?
ಸಾಕಾಯ್ತು ಕಷ್ಟ!
ಬೇಡ ನಂಗೆ ನಿಜಪ್ರಾಣನಷ್ಟ.

೬. ಕರ್ತ, ಬಂದು, ನೊಗ ಬಿ
ಚ್ಚಿ ಹಾಕು!
ಬಿಡಿಸೆನ್ನ! ಹೊತ್ತ ಹೊರೆ ಸಾ
ಕು!
ನಿನ್ನಿಕ್ಕೆ ಲೇಸು!
ಹೃದದಿಷ್ಟ ಸೂರ್ಯ ನೀನೆ,
ಯೇಸು!



## ೧೫೫.

Mel. Ich will streben. 87.

೧. ಜೀವವನ್ನ
ಹೊಂದ ನನ್ನ
ಆಶೆ ಇಹುದು;
ದೃಢದಿಂದ
ಇಂದಿನಿಂದ
ತಡ ಮರೆತು,

ಹೋಗುತೇನೆ ಗುರಿಗೆ;
ಹಿಂದಕೆಂದು ದೃಷ್ಟಿಸೆ.
ಎಲ್ಲ ಬಿಟ್ಟು,
ಮನಸಿಟ್ಟು
ಅರ್ಸಿ ಕೊಂಬೆನು.

೨. ಪೀಠಕಾಗಿ
ಓಡಲಾಗಿ
ತ್ವರೆ ಪಡುವೆ.
ಲಾಭವೇನು,
ಕೀರ್ತಿಯೇನು
ಉದಾಸೀನನಗೆ?
ಯುದ್ಧದೊಳ್ ವೈಗಳನು
ಜಯ ಹೊಂದ ಕೂಡದು,
ನಿದ್ರೆಗಾರ
ಗೆಲ್ಲಲಾರ.
ನೆನೆ, ಮನವೆ!

೩. ಮಾರ್ಗದಲ್ಲಿ
ಕುಂದುವಲ್ಲಿ
ಮೋಕ್ಷಗುರಿಗೆ
ನೋಡಿ, ನನ್ನ
ದೃಷ್ಟಿಯನ್ನ
ತಪ್ಪ ಗೊಡದೆ,
ಮುಂದೆ ಮುಂದೆ ನಡೆದು,
ಮೋಕ್ಷ ಅರ್ಸಿ ಕೊಂಬೆನು.

ಯೇಸು, ದಯ
ಮಾಡಿ, ಜಯ
ಕೊಡು ನನಗೆ.

೪. ಕೇಳು, ನಿನ
ಶಿಶುವಿನ
ಮೊರೆ, ತಂದೆಯೆ!
ಶಕ್ತಿಯಾದ
ಆಶೀರ್ವಾದ
ಕೊಡು, ಕ್ರಿಸ್ತನೆ!
ಜ್ಞಾನ ತ್ರಾಣವೆರಡೇ
ಕೊಡು, ದೇವರಾತ್ಮವೇ!
ಜೀವವನ್ನ
ಹೊಂದ ನನ್ನ
ಆಶೆಯಾದದೆ!



## ೧೫೬.

Mel. Wer weiss wie nahe mir mein Ende. 146. 26. 120.

೧. ಜೀವಾಂತ್ಯಕಾಲ ಯಾರು ಬಲ್ಲ?
ಮೃತ್ಯೆನ್ನ ಬೆನ್ನು ಬಿಡದು;
ಇಂದೂ ಶರೀರ ಸ್ಥಿರವಲ್ಲ;
ಯಾನ್ ತೃಣಪ್ರಾಯದವನು.

ಕ್ರಿಸ್ತೇಸುರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೨. ಹೊತ್ತಾರೆ ನಿದ್ದೆ ತಿಳಿದಾಗ
ಸಂಜೇ ಪ್ರಸ್ತಾಪವರಿಯೆ.
ಭೂಮಿಾಲಿ ವಾಸ ಮಾಡುವಾಗ
ಬಿಡಾರ ಸ್ಥಿರವಹುದೆ?
ಕ್ರಿಸ್ತೇಸುರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೩. ಓ ಪ್ರಾಣ, ಜೀವಕಾಲದಲ್ಲಿ
ಜೀವಾಂತ್ಯವನ್ನು ನೆನಸು!
ಕ್ರಿಸ್ತೇಸುನಾಥಮೃತಿಯಲ್ಲಿ
ವಿಶ್ವಾಸಿಯಾಗಿ ಮುಣುಗು!
ಕ್ರಿಸ್ತೇಸುರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೪. ಯಾನ್ ಬಾಳುತೇನೆ ಯೇಸುವಲ್ಲಿ.
ಯಾರ್ ಅಗ್ಲಿಸಲ್ಕೆ ಬಲ್ಲರು?
ಕೈ ಹಾಕಿ ಯೇಸುಪಕ್ಕೆಯಲ್ಲಿ,
ನನ್ನೀಶ! ದೇವ! ಅಂಬೆನು.
ನೀ ಹೊಯ್ದ ರಕ್ತಕಾಗಿಯೇ
ಸುವ್ಮೃತಿ ಕೊಡು, ಯೇಸುವೇ!

೫. ಓ ಪಿತ, ಶುದ್ಧ ಸ್ನಾನದಿಂದ
ನಿಂಗಿಷ್ಟ ಪುತ್ರನಾದೆನು;
ಅಂದೇಸುನಾಥಕೃಪೆಯಿಂದ
ನಿನ್ನೊಲ್ಮೆ ಸ್ಥಿರವಾಯಿತು.
ಸ್ವಪುತ್ರರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೬. ನಾನಿಲ್ಲಿ ಯೇಸುದೇಹವನ್ನ
ತಿಂದೇಸುರಕ್ತ ಕುಡಿದೆ;
ಹೀಗಾಗಿ ಯೇಸುವಿನ್ನು ನನ್ನ,
ನಾನೇಸುವಗಲಹುದೆ?
ಕ್ರಿಸ್ತೇಸುರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೭. ನಾನಿಂದು, ನಾಳೆ ಸತ್ತರೇನು?
ವಿಶ್ವಾಸ ಕಳೆದಂಜಲೋ?
ನನ್ನಲ್ಲಿ ಕಾಣ್ಬ ದೋಷವೇನು?
ಕ್ರಿಸ್ತೇಸುನೀತಿ ಸಾಲದೋ?
ಕ್ರಿಸ್ತೇಸುರಕ್ತಕಾಗಿಯೇ
ಸುವ್ಮೃತಿ ಕೊಡು, ದೇವರೇ!

೮. ಸಂತೃಪ್ತನಾಗಿ ಬಾಳುತೇ
 ನೆ,
ಸ್ವಚಿಂತೆಯೆಲ್ಲ ಮರೆತು.
ನಿನ್ನಲ್ಲಿ ದೃಢನಾಗಿದ್ಧೇನೆ;
ನಿನ್ನಿಷ್ಟೆ ನನ್ನ ಸುಖವು.
ಅಮೂಲ್ಯ ಕ್ರಿಸ್ತರಕ್ತವೆ
ಸುವೃತಿಯಿೂಯ್ವದೆನಗೆ!

---

### ೧೫೭.

Mel. Tod, mein Hüttlein kannst du brechen. 62. 139.

೧. ದೇಹವೆಂಬ ಪಾತ್ರೆಯನ್ನು
ಮೃತ್ಯು ಮುರಿಧಾಕಲು,
ಕೊಲ್ಲಲಾರದಾತ್ಮವನ್ನು;
ನನ್ನ ಸಾಲ ಸಂದಿತು!
ಹ್ಯಾಗೆ? ಮಧ್ಯವರ್ತಿಯು
ನನಗಾಗಿ ಸತ್ತನು.

೨. ಆತ ತನ್ನ ರಕ್ತ ಚಲ್ಲಿ,
ನೀತಿಗಾಗಿ ಏಳಲು,
ರಕ್ತಬಂಧುಜನರಲ್ಲಿ
ಸ್ಥಳವೆನಗಾಯಿತು.
ರಕ್ತಬಲಿಯಿಂದಲೆ
ನಾನು ಜೀವ ಹೊಂದಿದೆ.

೩. ನನ್ನ ಮರ್ತ್ಯ ದೇಹವನ್ನು
ರೋಗ ತಿಂದು ಬಿಟ್ಟರೆ,
ಹ್ಯಾಗು ಒಂದೆ ನುಡಿಯನ್ನು
ಘಟ್ಟಿ ಹಿಡುಕೊಳ್ಳುವೆ—
"ಜೀವವುಳ್ಳ ಕರ್ತನು
ನನ್ನ ಜೀವಮೂಲವು."

೪. ಸಾಯುವಾಗ ಜೀವಪಾನ
ಕೊಡು, ಪ್ರಿಯ ಕರ್ತನೆ!
ಪಂಚ ಘಾಯದಿಷ್ಟ ಧ್ಯಾನ
ಮಾಡಿ, ನಿದ್ರೆ ಗೈಯುವೆ.
ಯೇಸು, ನಿನ್ನ ನೀತಿಯು
ನನ್ನ ಬಿಳಿ ವಸ್ತ್ರವು!

---

### ೧೫೮.

Mel. Auferstehn, ja auferstehn wirst du. 68.

೧. ನನ್ನ ದೇಹ, ನೀನು ಏಳು
 ವಿ,
ವಿಶ್ರಾಂತಿ ತೀರಿಸಿ!
ನಿರ್ಭಯವಾಗಿ
ನೀ ಕರ್ತಗೆದುರಾಗಿ
ನಿಂತಿರುವಿ.

೨. ಭೂಮಿಯಲ್ಲಿ ಬಿದ್ದ ಬೀ
 ಜವು,
ವಸಂತ ಬರಲು,

ಉಜ್ಜೀವಿಸೋದು;
ಈ ದೇಹಕೂ ಬರೋದು
ವಸಂತವು.

೨. ಹರ್ಷಸ್ತೋತ್ರಪೂರ್ಣದಿ
ನಕೆ
ನನ್ನಾಶೆ ಹೋಗುತೆ;
ತುತೂರಿರಾಗ
ಸಮಾಧಿಗಿಳಿದಾಗ,
ನಾನೇಳುವೆ.

೪. ಸ್ವಪ್ನ ಕಂಡ ಹಾಗೆ ಇರು
ವೆ,
ಆ ದಿನ ಬರಲೆ;
ಈ ಪಾಪಭಾರ,
ಅರಣ್ಯದುಃಸಂಚಾರ
ತೀರುತ್ತದೆ.

೫. ನನ್ನ ಕರ್ತನನ್ನು ನೋ
ಡುವೆ
ಆ ಲೋಕದೊಳಗೆ;
ಸಾರೂಪ್ಯನಾಗಿ,
ಕಾರುಣ್ಯಸ್ತೋತ್ರವಾಗಿ
ನಾ ಬಾಳುವೆ.

---

೧೪೯.

Mel. Mit Fried und Freud fahr ich dahin. 88.

೧. ನನ್ನಾಪ್ತದೇವಚಿತ್ತಕೆ
ನಾನೊಡಂಬಟ್ಟು,
ಈ ಲೋಕ ಬಿಟ್ಟು ಹೋಗುವೆ,
ಶಾಂತಿ ಪಟ್ಟು.
ಮೃತಿ ಒಳ್ಳೆ ನಿದ್ದೆಯೇ;
ವಿಶ್ವಾಸಿ ಸಾಯೊದಿಲ್ಲ.

೨. ಓ ಕ್ರಿಸ್ತ, ದೇವಪುತ್ರನೆ,
ನಿನ್ ಹತ್ರ ಬಂದೆ!
ನಿನ್ನಲ್ಲಿ ದೇವರೆನಗೆ
ಪ್ರಿಯ ತಂದೆ.
ಸತ್ತರೇನು ಚಿಂತೆಯು?
ನಿನ್ನಲ್ಲಿ ಮೃತಿ ಜೀವ!

---

೧೫೦.

Mel. Seelenbräutigam. 29. 35. 36.

೧. ನಮ್ಮ ಆಯುಸು
ಬಹು ಸ್ವಲ್ಪವು;
ಬೇಗ ಬಹುದಂತ್ಯಶ್ವಾಸ;
ಲೋಕ ಕೊಡುವೀ ವಿಲಾಸ
ಬಹು ಕಾಲವು
ನಿಲ್ಲಲಾರದು.

೨. ವ್ಯರ್ಥ ಭ್ರಮೆಯು
ಇನ್ನು ಬೇಡವು.
ಚುರುಕಾದ ಬುದ್ಧಿಯನ್ನು,
ಹೃದ್ವಿಶುದ್ಧಭಾವವನ್ನು
ಕೊಡು ನಮಗೆ,
ಪ್ರಿಯ ಕರ್ತನೆ!

೩. ಇಂದು ನಮ್ಮದು;
ನಾಳಿನಾಪತ್ತು
ಪೂರ್ಣ ಮರ್ಮವಿರಲಾಗಿ,
ನಿತ್ಯ ಆತ್ಮಸುಖಕಾಗಿ
ನೋಡದವನೇ
ಮೂಢನಲ್ಲವೇ?

೪. ನನ್ನ ಆತ್ಮಕೆ
ಒಂದೆ ಯೋಚನೆ—
"ಈ ಪ್ರಪಂಚವೆಲ್ಲ ಲಯ;
ಏಕ ಗತಿ ನಿನ್ನ ದಯ!"
ದಯವೆನಗೆ
ಕೊಡು, ಯೇಸುವೆ!

---

## ೧೬೧

Mel. Himmelan, nur himmelan. 59.

೧. ಪರಲೋಕಕೆಂದಿಗು
ಮಾರ್ಗ ಹಿಡಿದು
ಹೋಗು! ಅಲ್ಲಿ ತುಂಬೊದು
ಭಕ್ತರಾಶಿಯು.
ಭೂಲೋಕದಿ
ಸುಖದುಃಖವಾಗುತೆ;
ಊರ್ಧ್ವಘನದೆಶೆಗೆ
ಕಣ್ಣಿರಲಿ!

೨. ಪ್ರತಿ ದಿನ ಅಲ್ಲಿಗೆ
ಆತ್ಮವೆಬ್ಬಿಸು!
ಈ ಪ್ರಯಾಣ ಶೀಘ್ರವೆ
ತೀರಿ ಹೋಗೊದು.
ಯಾವಾಗಲು,
ಪರಮಾರ್ಥಮುಕ್ತಿಗೆ
ಸಿದ್ಧನಾಗಿ ಇರ್ವರೆ,
ಓ ಎಚ್ಚರು!

೩. ಪರಲೋಕದಾಲಯ
ನಿನ್ನ ಗತಿಯು.
ಈ ಪ್ರಪಂಚಮಾಯದ
ಚಿಂತೆ ಬೇಡವು.
ವಿಸರ್ಜಿಸು
ಲೋಕದಾಶೆ, ಮನವೇ!
ಪರಲೋಕದಾಸ್ತಿಯೇ
ನಿರ್ಣಯವು!

೪. ಕರ್ತನನ್ನು ದೃಷ್ಟಿಸಿ,
ಮೋಕ್ಷ ಶೇರಲೇ,

ಹಲ್ಲೆಲೂಯಾ ಹಾಡುವಿ;
ಎಂಥ ಸುಖವೇ!
ವಿಜಯವು!
ಕ್ರೂಜೆಯಿಂದ ಪೀಠಕೆ
ಎದ್ದ ಜಯಶಾಲಿಗೆ
ವಿಜಯವು!



## ೧೬೨.

Mel. Mein Heiland nimmt die Sünder an. 98.

೧. ಮೇಲಾದ ಸ್ವಂತ ದೇಶಕೆ
ದಿನಾಲು ಸಾರುತಿರುತೇನೆ.
ಈ ಜೀವ ಬಾಲಶಿಕ್ಷೆಯೆ;
ದೇಶಾಂತ್ರಿಯಾಗಿ ಇಲ್ಲಿದ್ದೇನೆ.
ಈ ಜೀವ ಬರೆ ಮಾರ್ಗವೇ,
ಸ್ವಪಟ್ಣ ಪರದಲ್ಲಿಯೇ!
ನಾನಲ್ಲಿ ಯೇಸು ಕ್ರಿಸ್ತನಿಂದ
ಸ್ವತಂತ್ರ ಹೊಂದುವದರಿಂದ
ನಾನಾತನಿಷ್ಟ ಪಾದಕೆ
ಬಂದಾಗ ಹರ್ಷಗೊಳ್ಳುವೆ.

೨. ನಾನಲ್ಲಿ ಶೇರಿದಾಗಲು,
ಸಂಸ್ತುತಿ ಎಂದು ತೀರ್ವದಿಲ್ಲ;
ಕಾಣೋದು ಮರ್ಮವೆಲ್ಲವು;
ಆಶ್ಚರ್ಯಕಲ್ಲಿ ಮಿತಿ ಇಲ್ಲ.
ಅಲ್ಲೆಂಗೆ ಪೂರ್ಣವಹುದು
ಪವಿತ್ರ ಕ್ರೂಜೆಫಲವು;
ವಿಶ್ವಾಸಿಸಿದ್ದು ಶೋಭಿಸೋ
ದು,
ಅಪೇಕ್ಷಿಸಿದ್ದು ಒದಗೋದು;
ಕ್ರೂಜೇಲಿ ಸತ್ತ ಕರ್ತಗೆ
ಅನಂತಸ್ತೋತ್ರ ಹಾಡುವೆ.

೩. ನಾನಲ್ಲಿ ಅಪ್ಪಿ ಕೊಳ್ಳುವೆ
ಇಲ್ಲ್ಯಗ್ಲಿ ಹೋದ ಪ್ರಿಯರನ್ನು;
ಈ ಕಣ್ಣಿನಿಂದ ದೃಷ್ಟಿಪೆ
ಮಹತ್ವವುಳ್ಳ ಕರ್ತನನ್ನು.
ಸಮಸ್ತ ದೂತಗಣವೂ
ವಿಮುಕ್ತಭಕ್ತಸಭೆಯೂ
ಅನಂತ್ಯ ದಿವ್ಯ ಸ್ತೋತ್ರರಾಗ
ತಮ್ಮೊಡೆಯಂಗೆ ಹಾಡುವಾಗ
ಆ ಮಂಗಳಾತ್ಮರೊಂದಿಗೆ
ಅವಾಚ್ಯ ಸುಖ ಪಡುವೆ.



## ೧೬೩.

Mel. Jerusalem, du hochgebaute Stadt. 133.

೧. ಯೆರೂಸಲೇಮ್,
ಮೇಲೂರು, ನಿನ್ನಲೆ
ನಾನಿದ್ದರೊಳ್ಳೆದು!

ಎಂದೆನಗೆ
ಸ್ವಪಟ್ಣದೊಳಗೆ
ಪ್ರವೇಶವಾಗೊದು?
ನನ್ನಾತ್ಮ ಇಹವನ್ನು
ಬಿಟ್ಟೇರಿ ಮೇಲಕೆ,
ಪ್ರಪಂಚತುಷ್ಟಿಯನ್ನು
ವಿಸರ್ಜಿಸುತ್ತದೆ.

೨. ಸುದಿನವೆ!
ಓ ಸುಮುಹೂರ್ತವೆ!
ನೀನೆಂದು ಬರುವಿ?
ಸ್ವದೇಶಕೆ
ನಾನೆಂದು ಮುಟ್ಟುವೆ
ಆಕಾಶರಥದಿ?
ಪ್ರೀತ್ಯಾಗಿ ಭಕ್ತರನ್ನು
ಕಾಪಾಡುವಾತಗೆ
ಎಂದೆನ್ನ ಆತ್ಮವನ್ನು
ನಾ ಕೊಟ್ಟು ಬಿಡುವೆ?

೩. ನಾ ಶೇರ್ವೆನು
ಆ ಘನಕೋಟೆಗೆ
ಮಹಾ ಸಂತೋಷದಿ;
ವಿಮುಕ್ತರ
ಆ ಘನಸಂಘಕೆ
ನಾ ಶೇರ್ವೆ ಹರ್ಷಿಸಿ.
ಪ್ರವಾದಿಜನತತಿ,
ಅಪೊಸ್ತಲಾಳಿಯು,
ಸಮಸ್ತ ಭಕ್ತರತಿ
ಹೊಳ್ಪಾಗಿ ಕಾಣ್ಬರು.

೪. ಯೆರೂಸಲೇಮ್,
ಸಂತೋಷಪೂರ್ತಿಯು
ನಿನ್ನಲ್ಲಿ ತೀರದು!
ಹಲ್ಲೆಲೂಯಾ!
ನಿನ್ನಲ್ಲಿ ನಿತ್ಯಕು
ಸಂಸ್ತುತಿಗೀತವು.
ಓ ಕರ್ತ, ಅಲ್ಲಿ ನನ್ನ
ನೀ ಬೇಗ ಮುಟ್ಟಿಸು!
ಆ ನಿತ್ಯ ಹೊಸಿಯನ್ನ
ಹಾಡೋದು ಮುಕ್ತಿಯು.



## ೧೬೪.

Mel. O du Liebe meiner Liebe.
1. 28. 34. 40. 76. 85.

೧. ಯೇಸು ಕ್ರಿಸ್ತಗೆನ್ನ ಪ್ರಾಣ
ವಶ ಮಾಡಿ ಕೊಟ್ಟದೆ!
ದೇಹವಗಲೋ ಪ್ರಯಾಣ
ರಮ್ಯವಾದದೆನಗೆ.
ಈ ಪ್ರಪಂಚವಂ ಬಿಡೋಣ
ನನಗತಿಹರ್ಷವು;

ಕ್ರಿಸ್ತನೈಕ್ಯ ಪಡೆಯೋಣ
ನನ್ನ ಸುಖಪೂರ್ತಿಯು.

೨. ಇಹಪರದಲ್ಲಿ ಭೀತಿ
ನನಗಿನ್ನು ಬಾರದು;
ಯೇಸು ಕ್ರಿಸ್ತನಾಥಪ್ರೀತಿ
ನನ್ನ ಒಂದೆ ಗೀತವು.
ಆತ ನೋಡಿ ನನ್ನ ಶಾಪ,
ಚಲ್ಲಿ ತನ್ನ ರಕ್ತವ,
ರಕ್ತದಿಂದ ನನ್ನ ಪಾಪ
ಪರಿಹಾರ ಮಾಡಿದ.

೩. ಬುದ್ಧಿ ಕೆಟ್ಟ ಶತ್ರುವನ್ನು
ಸ್ನೇಹ ಮಾಡಲೊಲೆದು,
ತಪ್ಪಿ ಹೋದ ಕುರಿಯನ್ನು
ಹುಡುಕುತ್ತಲಿದ್ದನು.
ಆತ್ಮ, ಪೂರ್ಣ ಸ್ನೇಹದಿಂದ
ಯೇಸುವನ್ನು ಹುಡುಕು!
ನಿನ್ನ ಪೂರ್ಣ ಶಕ್ತಿಯಿಂದ
ಆತನನ್ನು ಸೇವಿಸು!

---

## ೧೬೫.

Mel. Freu dich sehr, o meine Seele. 63. 75. 150.

೧. ಶಿರೆಯಿಂದ ಚೀಯೋನ
ನ್ನು
ಕರ್ತ ಬಿಡಿಸುತ್ತಲು,
ಭಯಂಕರ ಸ್ವಪ್ನವನ್ನು
ಕಂಡ ಹಾಗಿರುವೆವು;
ಆಗ ಹೃತ್ಸಂತೋಷದಿ
ಕರ್ತನನ್ನು ಸುತ್ತಿಸಿ,
ರಾಜ್ಯದಿ ಪ್ರವೇಶಿಸೇವು,
ಆತಗೆರಗಿ ಕೊಂಡೇವು.

೨. ಎತ್ತಿ ನಿನ್ನ ಹಸ್ತವನ್ನು,
ನಮ್ಮನಾಶೀರ್ವದಿಸು!
ಕಷ್ಟ ಪಡುವವರನ್ನು
ಕಂಡು, ಮೆಚ್ಚಿ, ಸಲಹು!
ತ್ರಾಣವುಳ್ಳ ಅರಸ,
ನಮ್ಮ ಪ್ರಿಯ ರಕ್ಷಕ!
ಜೈಸಿ ನಮ್ಮ ಶತ್ರುವನ್ನು,
ಕಾಯಿ ನಿನ್ನ ಪ್ರಜೆಯನ್ನು!

೩. ಆಗಲಶ್ರುಧಾರೆ ಬಿಟ್ಟು,
ಬೀಜ ಬಿತ್ತಿದವರು
ಮಹಿಮೇ ಕಿರೀಟವಿಟ್ಟು,
ಪೂರ್ವ ಶ್ರಮ ಮರೆತು,
ಪೈರು ತಂದು ಇರಿಸಿ
ಪರಲೋಕರಾಜ್ಯದಿ,
ಸರ್ವವಂದನೀಯನನ್ನ
ನುತಿಸೋರು. ಹೊಸಿಯನ್ನ!

---

## ೧೬೬.

Mel. Wie wird uns sein. 161.

೧. ಸಂಕಷ್ಟವುಳ್ಳ ಅಂತ್ಯಯು
ದ್ಧದಲ್ಲಿ
ವಿಜಯ ಗೊಂಡು, ನೆರೆ ದಣಿ
ದು,
ಅನಂತಶಾಂತಿಗಾಗಿ ಮನೆಯ
ಲ್ಲಿ,
ಈ ರಣಭೂಮಿ ಬಿಟ್ಟು, ಸೇರ
ಲು,
ಬೆವರ್ದ ಮೋರೆಯೊರ್ಸಿ,
ಕಾಲಿನಿಂದ
ಧೂಳನ್ನು ಝಾಡಿಸ್ಯಕ್ಷಿ ತೆರೆ
ದು,
ನಾಂ ಮುಂಚೆ ನಂಬಿದೆಲ್ಲ ಹ
ರ್ಷದಿಂದ
ಹೊಂದಿರಲೆಮಗೆಂಥ ಸುಖವು!

೨. ಅನಾದಿಸೂರ್ಯಶುದ್ಧ
ಕಾಂತಿ ಮೂಡಿ,
ಸಂಭ್ರಮವೆಮ್ಮ ಮೇಲೆ ಹೊ
ಯ್ಯಲು,
ವಿಮುಕ್ತಭಕ್ತಸಭೆಯನ್ನು
ಕೂಡಿ,
ಅನಂತತೇಜವನ್ನು ಪಡೆದು,
ಸ್ವರಾಜ್ಯದೊಳ್ ಪುನೀತ ರಾ
ಜರಾಗಿ
ಪ್ರವೇಶ ಮಾಡಿ, ದೋಷ ಕಳಿ
ತು,
ಸ್ವಗೃಹದಲ್ಲಿ ಶುದ್ಧ ಮಕ್ಕಳಾಗಿ
ಹೊಕ್ಕಾಗಲೆಮಗೆಂಥ ಸುಖ
ವು!

---

## ೧೬೭.

Mel. Kommt, Brüder, lasst uns gehen. 77. 147.

೧. ಸಂಧ್ಯೋಯ್ತು ದಿನ; ಬ
ರ್ರಿ!
ಹೋಗೋಣ, ಭ್ರಾತರೆ!
ಗಂಡಾಂತ್ರವುಂಟು, ಸರಿ,
ಈ ಕಾಡಿನೊಳಗೆ.
ಪಡೋಣ ಧೈರ್ಯವ!
ವಿಶ್ವಾಸಯಾತ್ರೆಯನ್ನು
ಪೂರೈಸೊ ತ್ರಾಣವನ್ನು
ತಂದೀಯ್ವನೊಡೆಯ.

೨. ಇಕ್ಕಟ್ಟು ಹಾದಿಯಲ್ಲಿ
ಪ್ರಯಾಸ ಪಟ್ಟರು,
ಆ ಕರೆದಾತನಲ್ಲಿ
ವಿಶ್ವಾಸಿಸುವೆವು!

ಯೆರೂಸಲೇಮಿಗೆ
ನಮ್ಮಾತ್ಮದೃಷ್ಟಿ ಇಟ್ಟು,
ಈ ಕಾಡುಲೋಕ ಬಿಟ್ಟು,
ಹೋಗೋಣ, ಭ್ರಾತರೆ!

೩. ಪ್ರಪಂಚದನುಭೋಗ
ಏನೇನು ನೋಡದೆ,
ನಿರ್ವಿಘ್ನನಾಗಿ ಹೋಗ
ದೇಶಾಂತ್ರಿಕಟ್ಟಳೆ.
ಅಭಯವಾಗಲಿ!
ಪ್ರಪಂಚವನ್ನು ಬಿಟ್ಟು,
ಬೈಲಾಶೆ ತೆಗದಿಟ್ಟು,
ಆ ಗುರಿ ನೋಡಿರಿ!

೪. ಬರ್ರೋ! ಸಂತೋಷವಾ
ಗಿ
ಕೈ ಕೊಟ್ಟು ಹೋಗಿರಿ!
ಯಾರೊಬ್ಬ ಬೀಳಲಾಗಿ,
ಸಹಾಯ ಮಾಡಿರಿ!
ಪ್ರಯಾಣ ಸಣ್ಣದು;
ನಾಂ ನಾಳೆ ಸ್ವಾಸ್ಥ್ಯದಲ್ಲಿ,
ನಮ್ಮಪ್ಪಮನೆಯಲ್ಲಿ,
ಪ್ರವೇಶ ಗೊಂಬೆವು.

---

## ೧೬೮.

Mel. So geht's von Schritt zu Schritt. 151.

೧. ಹೀಗ್ಹೋಗುಥೋಗುತ
ಈ ಜೀವ ಜಾರೊದು;
ಬಿರ್ರಾನೆ ಬಪ್ಪುದು
ಜೀವಾಂತ್ಯಕಾಲವು.
ಸಂಥೋದ ದಿನವು,
ಸಂಥೋದ ವರುಷ
ಏನಾಯ್ತು? ಇರದು
ಒಂದೂ ಪ್ರಯೋಜನ.

೨. ಈ ಜೀವವೆನಗೆ
ಒಲ್ದಿತ್ತ ದೇವರೇ,
ಅದನ್ನು ತಿರಿಗಿ
ನಿಂಗೀಯ್ವೆನೀಶನೇ!
ನಿಂಗಾಗಿ ಬದುಕಿ,
ನಿಂಗಾಗಿ ಸಾಯುವೆ;
ನಾ ನಿತ್ಯ ಕಾಲಕು
ನಿನ್ನಾಳು, ಕರ್ತನೆ!

೩. ಇದೆನ್ನ ಮನೆಯೆ?
ಇದನ್ಯ ಸ್ಥಳವೆ!
ಇಲ್ಲಿಂದ ಹೋಗುವೆ
ತಂದೇ ನಿವಾಸಕೆ.
ಈ ಜೀವದುಳುಹು,

ಓ ತಂದೆ, ನಿನ್ನದು;
ಇಲ್ಲಲ್ಲಿ ಸರ್ವತ್ರ
ನಾ ನಿನ್ನ ಮಗನು.

೪. ನನ್ನನ್ನು ಇಹದಿ
ನೀ ಸಿದ್ಧಿಸೊಡೆಯ!
ನೀನೊಳ್ಳೆ ಪದವಿ,
ನೀ ಜೀವದರಸ!
ನನ್ನನ್ನು ನೋಡದೆ,
ಕಡೇ ಸಂಕಷ್ಟದಿ
ಕ್ರಿಸ್ತೇಸುವಪ್ಪುವ
ವಿಶ್ವಾಸವಿರಲಿ!

೫. ನನ್ ಹೃತ್ತು ಯೇಸುವೊ
ಳ್;
ಬೇಡರಿಸಲಿಗೆ!
ನನ್ನಾಸ್ತಿ ಯೇಸುವೆ;
ನಾ ತೃಣಪ್ರಾಯನೆ!
ಕೆಟ್ಟೋದ ಮಗಗೆ
ಕಟಾಕ್ಷ ಶಿಕ್ಕಿತು.
ನಿಂಗೆನ್ನ ಪಿತನೆ,
ಕೃತಜ್ಞನಾದೆನು.

೬. ಪಿತಾಪುತ್ರಾತ್ಮವೆ,
ನೀನೆನ್ನ ದೇವರು;
ನೀನೆನ್ನ ರಕ್ಷಕ;
ನೀ ಸೃಷ್ಟಿಕರ್ತನು!
ಉಂಟೆನ್ನ ರಕ್ಷಣೆ
ಪೂರಾಗಿ ನಿನ್ನಲೆ!
ನಿನ್ನಡಿ ನನಗೆ
ಹೃತ್ಸೌಖ್ಯವಾದದೆ!

೭. ಇದೆನ್ನ ಸಾಕ್ಷಿಯು—
“ನೀ ಮುಖ್ಯ ಪದವಿ;
ನೀನಾತ್ಮಜೀವಕೆ
ವಿಶ್ರಾಂತಿ ಕೊಡುತಿ;
ನಿಂಗೆರಗುವದೇ
ಮಹಾಂತ ಹರ್ಷವು;
ನಿನ್ನಾಳುತನವೇ
ಅನಂತ ಮುಕ್ತಿಯು!”

೮. ಎನ್ನಾತ್ಮ ಕಾದುಕೋ,
ಅಭಯದಾತನೇ!
ನಿಂಗಿತ್ತ ಒತ್ತೆಯ
ನೀ ಕಾಪಿ, ಯೇಸುವೇ!
ನನ್ನಂತ್ಯಶ್ವಾಸವು
ಪ್ರೇಮೋಕ್ತಿಯಾಹುದು;
ಆಚೇಲಿ ನಿನ್ನಲಿ
ವಿಶ್ರಾಂತಿಯಾಹೆನು.

# ಗೀತಗಳ ಆರಂಭಕ್ಕೆ ಅನುಕ್ರಮಣಿಕೆ.

 ಗೀತಗಳ ಆರಂಭಕ್ಕೆ ಅನುಕ್ರಮಣಿಕೆ.

 ಗೀತಗಳ ಆರಂಭಕ್ಕೆ ಅನುಕ್ರಮಣಿಕೆ.

CANARESE

# Hymn-Book

FIFTH EDITION

ದೇವರ ಸ್ತೋತ್ರಕ್ಕಾಗಿ

ದೇವಾಲಯಗಳಲ್ಲಿಯೂ, ಮನೆಗಳಲ್ಲಿಯೂ

ಭಕ್ತರು ಹಾಡ ತಕ್ಕ








MANGALORE

PUBLISHED BY PFLEIDERER & RIEHM

BASEL MISSION BOOK & TRACT DEPOSITORY

1867 

